# ತರಂಗಿಣೀ

ಕಥಾ ಮಾಸ ಪುಸ್ತಕಾವಳಿ

೫

...ನ ಸಂ||　　　　ಮಾಘ





ಬಾಲ ಸರಸ್ವತೀ

ಸರಸ್ವತೀಪೀಠಂ, ಬೆಂಗಳೂರು ಸಿಟಿ.

# ತರಂಗಿಣೀ.

( ವಿವಿಧ ಕಥಾ ಮಾಸಪುಸ್ತಕಾವಳಿ )

—೧—

# ವಿಯೋಗಿನಿ




ಬಾಲಸರಸ್ವತಿ ಯವರಿಂದ

ವಿರಚಿತವಾದುದು.

---


ಬೆಂಗಳೂರು ಸಿಟಿ.

ಕ್ಯಾಕ್ಸ್ಟನ್ ಬ್ರಾಂಚ್ ಮುದ್ರಾಲಯ.

ರಾ|| ಸಂ|| ಮಾಘ. ಕ್ರಯ . ೩. ಆಣೆ.

## ವಿ ಜ್ಞಾ ಪ ನೆ .

ವಿಯೋಗಿನಿಯು ಚಿಕ್ಕದಾದರೂ, ಸಂಸಾರ ಚಿತ್ರವು ಮನಕರಗುವಂತೆ ವರ್ಣಿತವಾಗಿರುವುದು. ನವ ವಧೂಮಣಿಗಳು ಈ ಗ್ರಂಥವನ್ನು ಆದರದಿಂದ ಓದಿ, ಹೇಗಿದ್ದರೆ ಸಂಸಾರದಲ್ಲಿ ಸುಖವುಂಟೆಂಬುದನ್ನು ತಿಳಿದು ವರ್ತಿಸುವುದಾದರೆ, ಇಹಲೋಕದ ಸುಖವೇ ಸ್ವರ್ಗಸುಖವೆನಿಸುವುದು.

ಬಾಲ ಸರಸ್ವತಿ.

ಜಯತು ಭಗವಾನ್

---

# ವಿಯೋಗಿನಿ

---

## ಒಂದನೆಯ ಪರಿಚ್ಛೇದ.

ವಾಸುದೇವ ವಿದ್ಯಾಭೂಷಣನು ಹಾಸಿಗೆ ಹಿಡಿದು ಮಲಗೇ ಬಿಟ್ಟನು. ರೋಗವು ದಿನೇದಿನೇ ಹೆಚ್ಚುತ್ತ ಬಂದಿತು. ಎಷ್ಟೋಮಂದಿ ವೈದ್ಯರು ಔಷಧಗಳನ್ನು ಕೊಟ್ಟರೂ ಗುಣಕ್ಕೆ ಬರಲಿಲ್ಲ. ಈ ದಿನ ಬಲು ಗಟ್ಟಿಗರಾದ ಡಾಕ್ಟರು ಸಾಹೇಬರುಗಳು ಬಂದು ನಿಂತಿದಾರೆ. ಎಲ್ಲರ ಕೈಯ್ಯಲ್ಲಿಯೂ ಔಷಧದ ಸೀಷೆಗಳು. ಎಲ್ಲರೂ ರೋಗಿಯ ಪಕ್ಕದಲ್ಲಿಯೇ ಇದ್ದುಕೊಂಡು ತಮ್ಮ ತಿಳಿವಳಿಕೆಯನ್ನೆಲ್ಲಾ ವೆಚ್ಚಮಾಡುತಿರುವುರು. ಅವರಿಗೆ ತೋರಿಬಂದ ಉಪಾಯಗಳನ್ನೆಲ್ಲಾ ಮಾಡಿಯಾಯಿತು. ಅಮೂಲ್ಯವಾದ ಔಷಧಗಳನ್ನು ಪ್ರಯೋಗಿಸುವುದರಲ್ಲಿ ಏನೂ ಕಡಮೆಯಾಗಲಿಲ್ಲ. ಒಬ್ಬರಾಗುತಲೆ ಮತ್ತೊಬ್ಬರು ರೋಗಿಗೆ ಔಷಧವನ್ನು ಕುಡಿಸುತ್ತಿದಾರೆ. ರೋಗಿಯೂ, ವೈದ್ಯಶಿಖಾಮಣಿಗಳನ್ನು ತಾನಾಗಿ ಕರೆಯಿಸಿದ ತಪ್ಪಿಗೆ, ಅವರು ಕೊಟ್ಟುದನ್ನೆಲ್ಲಾ ಅತಿ ಪ್ರಯಾಸದಿಂದ ಕುಡಿಯುತ್ತಿದಾನೆ. ಏನು ಕುಡಿದರೇನು? ರೋಗಿಗೆ ಬೇರ ಸಾವಿನಿಂದ ಉಳಗಾಲವು ಕಂಡು ಬರ

ಲಿಲ್ಲ. ಕ್ಷಣಕ್ಷಣಕ್ಕೆ ಬಲಹೀನನಾಗುತ್ತಿದ್ದನು. ಸಾಹೇಬ ರುಗಳು, ರೋಗಿಯು ಬದುಕುವ ಸಂಭವವಿಲ್ಲವೆಂದು ತಿಳಿದು ಕೊಂಡು, ಆ ಸ್ಥಳವನ್ನು ಬಿಟ್ಟು ಕದಲಿದರು.

ರೋಗಿಯು ಇದೆಲ್ಲವನ್ನೂ ನೋಡಿದನು. ಈ ಸಲ ತನಗೆ ಸಂಭವಿಸಿರುವ ರೋಗದಿಂದ ಉಳಿದುಕೊಳ್ಳುವುದು ದುರ್ಘಟವೆಂದು ತಿಳಿದು ತನ್ನ ಮಗನನ್ನು ಕರೆದು, ಹೇಳಬೇಕಾದುದನ್ನು ಹೇಳಿ ಇಹಲೋಕದಿಂದ ಮುಕ್ತನಾಗುವುದೇ ಲೇಸು, ಎಂದು ನಿರ್ಧರಮಾಡಿಕೊಂಡನು.

ಸಂಧ್ಯಾಕಾಲ. ವಾಸುದೇವ ಮಹಾಶಯನು ತನ್ನ ಮಗನನ್ನು ತನ್ನ ಹತ್ತಿರಕ್ಕೆ ಬರುವಂತೆ ಹೇಳಿದನು. ಕಾಳೀಕಿಶೋರನೂ ತಡಮಾಡದೆ ಬೇಗನೆ ಬಂದು, ತಂದೆಯ ಪಾದದೇಶದಲ್ಲಿ ಹಾಸಿಗೆಯಮೇಲೆ ಕುಳಿತುಕೊಂಡನು. ಬಾಯಿಂದ ಮಾತೇ ಹೊರಡಲಿಲ್ಲ. ಏನೊಂದೂ ತೋಚದೆ ಅಳತೊಡಗಿದನು. ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿದು ತಂದೆಯಪಾದಗಳನ್ನು ತೊಯಿಸುತಿದ್ದಿತು. ಕೂಡಲೆ ತಂದೆಯು ಮಗನನ್ನು ಹತ್ತಿರಕ್ಕೆ ಕರೆದು ಅವನ ಮೈದಡವಿ, ಮಗುವೆ, ನಿನ್ನನ್ನು ಈ ವರೆಗೂ ಆದರದಿಂದ ಸಲಹಿದೆನು. ವಿದ್ಯಾ ಬುದ್ಧಿಗಳನ್ನು ಕಲಿಸಿ ಬುದ್ಧಿವಂತನಾಗಮಾಡಿದೆನು. ತಂದೆಯಾದವನು ಮಗನಿಗೋಸ್ಕರ ಮಾಡಬೇಕಾದುವನ್ನೆಲ್ಲಾ ಒಂದೂ ಲೋಪವಿಲ್ಲದಂತೆ ಮಾಡಿರುವೆನು. ಈಗ ನನಗಾದರೋ ಕಾಲವು ಸಮೀಪಿಸುತ ಬಂದಿದೆ. ನಿನ್ನ ಕಣ್ಣೆದಿರಿಗೆ ನಾನು ಪರಲೋಕಗಮನ ಮಾಡುವುದು ಸರಿಯಾದುದು. ಇದೊ, ಇನ್ನು

ಬಂದಕ್ಕೆ ನೀನು ಬುದ್ಧಿವಂತನಾಗಿ ಗುರುಹಿರಿಯರನ್ನು ಪುರಸ್ಕರಿಸುತ್ತಾ ಚಿರಜೀವಿಯಾಗಿ ಬಾಳು. ಇಷ್ಟೇ ನನ್ನ ಕೋರಿಕೆ, ಇನ್ನೇನೂ ಇಲ್ಲ. ಎಂದು ಹೇಳಿದನು.

ಹೀಗೆ ಹೇಳುತಿರುವಾಗ ವಾಸುದೇವನ ಕಣ್ಣುಗಳಲ್ಲಿ ನಿರ್ಗಳವಾದ ಅಶ್ರುಧಾರೆ. ಅದನ್ನು ನೋಡಿ ಕಾಳೀಕಿಶೋರನ ಹೃದಯವೇ ಒಡೆದು ಹೋಯಿತು. ಬಲು ಹೊತ್ತು ಯಾರ ಬಾಯಿಂದಲೂ ಮಾತೇ ಹೊರಡಲಿಲ್ಲ. ಕಡೆಗೆ ತಂದೆಯು ಬಲು ಮುಟ್ಟಿಗೆ ತನ್ನ ವ್ಯಸನವನ್ನು ತಡೆದುಕೊಂಡು ಮತ್ತೆ-ಮಗುವೆ, ತಂದೆತಾಯಿಗಳು ಎಷ್ಟು ದಿವಸ ತಾನೆ ಬದುಕಿದ್ದಾರು? ಹಾಗೆ ಬದುಕಿದ್ದರೂ, ಎಂದಾದರೊಂದು ದಿನ ಸಾಯಲೇ ಬೇಕು. ಇದು ವಿಶ್ವವಿಧಾತನ ನಿಯಮವೇ ಆಗಿದೆ. ಇದಕ್ಕೆ ಸುಮ್ಮನೆ ವ್ಯಸನಪಟ್ಟೇನು? ಧೀರನಾದವನು ಮರಣವನ್ನು ಕುರಿತು ಎಂದಿಗೂ ದುಃಖಪಡುವುದಿಲ್ಲ.ನೀನೂ ನನ್ನ ಮರಣದಲ್ಲಿ ಇಷ್ಟು ಕಾತರನಾಗಲು ಕಾರಣವಿಲ್ಲ. ಮಗುವೆ, ಧೈರ್ಯವನ್ನು ತಾಳು; ಸುಖಿಯಾಗಿ ಬಾಳು, ಎಂದು ಹೇಳಿ ಸುಮ್ಮನಾದನು.

ಸ್ವಲ್ಪ ಹೊತ್ತಿನಮೇಲೆ ಕಾಳೀಕಿಶೋರನು ತಂದೆಯನ್ನು ಕುರಿತು ಗದ್ಗದ ಸ್ವರದಿಂದ ತಂದೆಯೇ, ಯಾವಜ್ಜೀವವೂ ತಂದೆತಾಯ್ಗಳು ಬದುಕಿಯೇ ಇರುತ್ತಾರೆಂಬ ನಿಯಮವಿಲ್ಲ, ಆದರೆ, ಬಹುಕಾಲ ತಂದೆತಾಯ್ಗಳ ಸೇವೆಯು ನನಗೆ ಲಭಿಸದೆ ಹೋದುದಕ್ಕಾಗಿ ವ್ಯಸನಪಡುತ್ತೇನೆ. ಬಾಲ್ಯದಲ್ಲಿಯೇ ತಾಯನ್ನು ಕಳೆದುಕೊಂಡೆನು. ಅಂದಿನಿಂದ ನಿನ್ನನ್ನೇ ತಂದೆಯೆಂದೂ, ತಾಯೆಂದೂ, ಈ ಲೋಕದಲ್ಲಿ ಸಮಸ್ತವೂ ನೀನೇ ಎಂದೂ

ನಂಬಿಕೊಂಡಿದ್ದೆನು. ಈಗ ನೀನೂ ನನ್ನನ್ನು ಕೈಬಿಟ್ಟು—ಎನ್ನುವುದರೊಳಗೆ ಕಾಳೀಕಿಶೋರನ ಬಾಯಿಯು ಕಟ್ಟಿಯೇ ಹೋಯಿತು.

ವಿದ್ಯಾಭೂಷಣನು—ಮಗುವೆ! ವ್ಯಸನಪಟ್ಟು ಪ್ರಯೋಜನ ಿಲ್ಲ, ಹಾಗೆ ವ್ಯಸನವನ್ನಿಟ್ಟುಕೊಂಡರೆ ಮುಂದಿನ ಕೆಲಸಕ್ಕೆ ಲು ತೊಂದರೆಯಾಗುವುದು. ನೀನು ಎಷ್ಟು ಅತ್ತರೆ ತಾನೆ ಆಯಿತು, ಸಾಯತಕ್ಕವರು ಬದುಕಬಲ್ಲರೆ? ನೀನು ಇದೆಲ್ಲ ನನ್ನು ಮನಸ್ಸಿಗೆ ತಂದುಕೊಳ್ಳದೆ ಧರ್ಮದಲ್ಲಿಯೇ ದೃಷ್ಟಿ ಯಿಟ್ಟು ನಡೆ,ಭಗವಂತನು ಕೆಡಕು ಮಾಡಲಾರನು. ಎಲ್ಲವನ್ನೂ ತಿಳಿದ ನಿನಗೆ ಹೆಚ್ಚಾಗಿ ಹೇಳಬೇಕಾದುದೇನಿದೆ? ಇದೊ, ಇದೇ ನಿನಗೆ ನಾನು ಹೇಳುವ ಕೊನೆಯ ಉಪದೇಶ. ಈಯು ಪದೇಶವು ಮಾತ್ರ ಯಾವಾಗಲೂ ನಿನ್ನ ಹೃದಯದಲ್ಲಿ ದೃಢವಾಗಿ ರಲಿ, ಎಷ್ಟೇ ಕಷ್ಟವೇ ಬರಲಿ, ಎಂತಹ ತೊಂದರೆಯೇ ಬರ ಗಲಿ, ಈ ತತ್ವವನ್ನು ಮಾತ್ರ ಮರೆಯಬೇಡ, ಕಂಡೆಯಾ?

ಹೀಗೆ ಹೇಳುತಿರುವಾಗಲೇ ಆವನ ಮುಖಮಂಡಲದಲ್ಲಿ ಅಪೂರ್ವವಾದ ಕಳೆಯೊಂದು ತಲೆದೋರಿತು. ದೇಹದಲ್ಲಿ ಒಂ ದು ವಿಧವಾಗಿ ಶಕ್ತಿಯುಂಟಾಯಿತು. ಏಳಲಾರದೆ ಮಲಗಿದ ವನು ತಟ್ಟನೆ ಎದ್ದು ಕುಳಿತುಕೊಂಡನು. ಆಮೇಲೆ ಕಣ್ಣು ಮುಚ್ಚಿಕೊಂಡು ಕೊಂಚ ಹೊತ್ತು ಹಾಗೆಯೇ ದೇವರ ಧ್ಯಾನ ವನ್ನು ಮಾಡಿ, ಕೇವಲ ವ್ಯಸನಾಕ್ರಾಂತನಾದ ಮಗನ ಮುಖ ವನ್ನು ನೋಡಿದನು. ಮಗನಾದರೋ ಕಲ್ಲಿನ ಬೊಂಬೆಯಂತೆ ಕುಳಿತುಕೊಂಡಿದಾನೆ. ಮಾತೇ ಇಲ್ಲ. ಅದನ್ನು ನೋಡಿ—

ಮಗುವೇ, ಧೈರ್ಯವನ್ನು ತಂದುಕೊಳ್ಳಲೇ ಇಲ್ಲ. ಏತಕ್ಕೆ ಹೀಗೆ ವ್ಯಸನಪಡುತ್ತೀಯೆ ? ನನ್ನ ಕಾಲವೇನೋ ಆಗಿಹೋಯಿತು. ಆದರೆ ನನ್ನದೊಂದು ಕೋರಿಕೆ ಇದೆ. ಅದನ್ನು ಮಾತ್ರ ನಡೆಯಿಸಿಕೊಡು, ಅದಿನ್ನಾವುದೂ ಅಲ್ಲ. ನೀನು ಬೇಗನೆ ನಿನ್ನ ಮಾವನ ಮನೆಗೆ ಹೋಗಿ ನನ್ನ ಸ್ಥಿತಿಯನ್ನು ತಿಳಿಸಿ ನಿನ್ನ ಹೆಂಡತಿಯನ್ನು ಕರೆದುಕೊಂಡು ಬಾ, ಅವಳನ್ನು ಒಂದು ಸಾರಿ ನೋಡಬೇಕೆಂಬ ಅಪೇಕ್ಷೆ ಇದೆ. ಈಗಲೇ ಹೊರಡು. ಬೆಳಗಾಗುವುದರೊಳಗಾಗಿ ಆಕೆಯನ್ನು ಕರೆದುಕೊಂಡು ಬಾ. ಕಾಲಹರಣಕ್ಕೆ ಅವಕಾಶವಿಲ್ಲ, ಎಂದನು.

ಕಾಳೀಕಿಶೋರನು ಸ್ವಲ್ಪ ವ್ಯಸ್ತನಾಗಿ-ತಂದೆಯೇ! ಇಂತಹ ಸಮಯದಲ್ಲಿ ನಿನ್ನೊಬ್ಬನನ್ನೇ ಹೇಗೆ ಬಿಟ್ಟುಹೋಗಲಿ ?

ಆಗ ತಂದೆಯು, ಆ ವಿಷಯದಲ್ಲಿ ನೀನು ಸ್ವಲ್ಪವೂ ಯೋಚನೆ ಮಾಡಬೇಡ. ನನ್ನನ್ನು ನೋಡಿಕೊಳ್ಳುವುದಕ್ಕೆ ದಾಸದಾಸಿಯರು ಇದ್ದಾರೆ. ಅಲ್ಲಿನ ವರೆಗೂ ಪ್ರಾಣವನ್ನು ಹಿಡಿದುಕೊಂಡಿರುತ್ತೇನೆ. ನೀನು ಧೈರ್ಯವಾಗಿ ಹೋಗು. ಹೋಗು, ಕರೆದುಕೊಂಡು ಬಾ, ಎಂದು ಮಗನನ್ನು ಸಂತೈಸಿ ಕಳುಹಿಸಿಕೊಟ್ಟನು.

---

## ಎರಡನೆಯ ಪರಿಚ್ಛೇದ.

ರಾಮರತ್ನರಾಯನು ರಸಾಲಪುರದಲ್ಲಿ ವಾಸಮಾಡಿಕೊಂಡಿದ್ದನು. ಅವನು ಒಬ್ಬ ಪರಮಶಾಕ್ತೇಯ ಬ್ರಾಹ್ಮಣ. ಅವನ

ಮೈಯಲ್ಲಿ ರಕ್ತಚಂದನದ ಪಟ್ಟೆಗಳು. ಕುತ್ತಿಗೆಯಲ್ಲಿ ಬಹು ವಿಧವಾದ ರುದ್ರಾಕ್ಷಮಾಲೆಗಳು. ಅವನು ಮನೆಯನ್ನು ಬಿಟ್ಟು ಹೊರಗೆ ಹೊರಟವನೇ ಅಲ್ಲ. ಯಾವಾಗಲೂ ಮನೆಯಲ್ಲಿಯೇ ಇದ್ದುಕೊಂಡು, ಎಲ್ಲರಿಗೂ ಬೇಸರವಾಗುವಂತೆ ಗೊಣಗುಟ್ಟುತ್ತಲೇ ಇರುವ ಪದ್ಧತಿ. ಅವನನ್ನು ನೋಡಿದೊಡನೆಯೇ ಅವನ ಹೆಂಡತಿಗೆ ಮೈಯ ರಕ್ತವೆಲ್ಲಾ ಇಂಗಿಹೋಗುವುದು. ಊರಿನವರೆಲ್ಲಾ ಇವನನ್ನು ನೋಡಿದ ಕೂಡಲೇ ಭಯದಿಂದ ದೂರವಾಗಿ ಓಡಿಹೋಗುತಲಿದ್ದರು. ದಾಸ ದಾಸಿಯರೆಲ್ಲಾ ಇವನನ್ನು ಮನುಷ್ಯರೂಪದ ಯಮನೆಂದು ಭಾವಿಸಿ ಇವನನ್ನು ಕಂಡೊಡನೆಯೇ ಗಡಗಡನೆ ನಡುಗುತಲಿದ್ದರು.

ಇಂತಹ ಗುಣಾಢ್ಯನಾದ ರಾಮರತ್ನನಿಗೆ ಒಬ್ಬಳೇ ಒಬ್ಬ ಮಗಳಿದ್ದಳು. ಅವಳ ಹೆಸರು ವಿಯೋಗಿನಿ. ಇವಳನ್ನು ವಿದ್ಯಾಭೂಷಣನ ಮಗನಿಗೆ ಅಂದರೆ ಪೂರ್ವಪರಿಚಿತನಾದ ಕಾಳೀಕಿಶೋರನಿಗೆ ಕೊಟ್ಟು ಮದುವೆ ಮಾಡಿದ್ದನು. ರಾಮರತ್ನನು ಪರಮಶಾಕ್ತೇಯ ಬ್ರಾಹ್ಮಣನೆಂಬುದು ಹಿಂದೆಯೇ ಹೇಳಲ್ಪಟ್ಟಿದೆ. ಇವನ ಬೀಗನಾದ ವಾಸುದೇವ ವಿದ್ಯಾಭೂಷಣನು ಪರಮವೈಷ್ಣವನಾಗಿದ್ದನು. ಈ ಮತ ವೈಷಮ್ಯದಿಂದ ಬೀಗಬೀಗರಿಗೆ ಅಂತರಂಗವು ಎಷ್ಟರಮಟ್ಟಿಗೆ ಹೊಂದಿಕೊಂಡಿರಬಹುದೋ, ಅದೆಲ್ಲವೂ ಮುಂದಣ ಕಥಾ ಸಂದರ್ಭಗಳಿಂದ ಗೊತ್ತಾದೀತು. ವಿಧಾತನ ಸಂಕಲ್ಪವು ಎಂತಹ ಪ್ರಬಲವಾದುದೋ ? ಅಂತೂ ಇವರಿವರಿಗೆ ಸಂಬಂಧವೇನೋ ಬೆಳೆದುಹೋಯಿತು. ಈ ಪರಮಶಾಕ್ತೇಯನಾದ ರಾಮರತ್

ನಿಗೆ ವಿಯೋಗಿನಿಯಲ್ಲದೆ ಬೇರೆ ಮಕ್ಕಳೇ ಇರಲಿಲ್ಲ. ಆದುದ ರಿಂದ ಅವಳನ್ನು ಬಲು ಅಕ್ಕರೆಯಿಂದಲೂ, ಸ್ನೇಹದಿಂದಲೂ, ಮಗನೆಂದೇ ತಿಳಿದು ರಕ್ಷಿಸಿಕೊಂಡು ಬರುತ್ತಿದ್ದನು. ಅವನ ಹೃದಯವು ಮರುಭೂಮಿಯಂತೆದೇ ಆದರೂ, ವಿಯೋಗಿನಿ ಯೊಬ್ಬಳು ಮಾತ್ರ ಆ ಮರುಭೂಮಿಯಲ್ಲಿ ಫಲಪುಷ್ಪ ಶೋಭಿತವಾದ ಒಂದು ಮನೋಹರ ವೃಕ್ಷದಂತೆ ಇದ್ದಳು. ಶ್ಯಾಮರತ್ನನು ಮಗಳ ಪೋಷಣೆಗಾಗಿ ಬೇಕಾದ ಪ್ರಯತ್ನ ಗಳೆಲ್ಲವನ್ನೂ ಮಾಡುತಿದ್ದನು, ವಿಯೋಗಿನಿಯೂ ಅವನಿಗೆ ಏಕ ಮಾತ್ರ ಹೃದಯಾಧಿದೇವತೆಯಾಗಿದ್ದಳು. ಅವಳಿಂದಲೇ ಅವ ನಿಗೆ ಹಗಲು ರಾತ್ರಿ, ಅವಳಿಂದಲೇ ಅವನಿಗೆ ಜೀವನ. ಬಲು ಮಾತಿನಿಂದೇನು, ಅವನ ಸರ್ವಸ್ವವೂ ಅವಳೇ. ಒಂದು ಕ್ಷಣ ಕಾಲವೂ ಅವಳನ್ನು ಬಿಟ್ಟು ಹೊರಗೆ ಕಾಲಿಟ್ಟವನೇ ಅಲ್ಲ.

ವಿಯೋಗಿನಿಯಾದರೂ, ನಿರುಪಮರೂಪವತಿ, ಗುಣ ವತಿ, ದಯಾವತಿ. ಇದಕ್ಕಿಂತಲೂ ಹೆಚ್ಚಾಗಿ ಅವಳ ರೂಪ ವನ್ನೇ ವರ್ಣಿಸ ಮಾಡಬೇಕೆಂಬುದು ನಮ್ಮ ಉದ್ದೇಶವಲ್ಲ. ಅದೂ ಅಲ್ಲದೆ ನವನ್ಯಾಸರಚನೆಯಲ್ಲಿ ಸ್ತ್ರೀವರ್ಣನೆಯೊಂದನ್ನು ಮಾಡಿಯೇ ತೀರಬೇಕೆಂಬ ನಿಯಮವೂ ಇಲ್ಲ. ಒಂದು ವೇಳೆ ನಿಯಮವುಂಟೆಂದು ಹೇಳುವ ಪಕ್ಷಕ್ಕೆ ಆ ನಿಯಮಕ್ಕೆ ನಾವು ಒಳಗಾಗಲಾರೆವು. ಅದಕ್ಕೆ ಕಾರಣವೂ ಇರುವುದು. ಮುಂದೆ ವಾಚಕರಿಗೇ ಗೊತ್ತಾಗುವುದು.

ಇಂತಹ ಸರ್ವಮಂಗಳೆಯಾದ ವಿಯೋಗಿನಿಯು ಶ್ಯಾಮ ರತ್ನನ ಮನೆಯಲ್ಲಿ ಶಿವಮನೋಮೋಹಿನಿಯಾದ ಪಾರ್ವತಿ

ಯಂತೆ ಕಣ್ಗೊಳಿಸುತಿದ್ದಳು. ಇಂತಹ ಮಗಳನ್ನು ಬಿಟ್ಟು ರಾಮರತ್ನನು ಹೇಗೆ ತಾನೆ ಜೀವವನ್ನು ಹಿಡಿದಾನು? ಮಗಳ ಮೇಲೆ ರಾಮರತ್ನನಿಗಿರುವ ಈ ಅನ್ಯಾದೃಶವಾದ ವಾತ್ಸಲ್ಯವು ಯಾರಿಗೂ ಗೊತ್ತಿಲ್ಲದೇ ಇರಲಿಲ್ಲ. ಅಷ್ಟೇನು, ಕಾಳೀಕಿಶೋರ ನಿಗೂ ಇದು ತಿಳಿಯದೇ ಇರಲಿಲ್ಲ.

ಒಂದು ದಿನ ರಾತ್ರಿ ಹತ್ತುಗಂಟೆಯಹೊತ್ತಿನಲ್ಲಿ ಕಾಳೀ ಕಿಶೋರನು ಮಾವನ ಮನೆಗೆ ಬಂದನು. ಕಾಳೀಕಿಶೋರನ ಮನೆಗೂ ರಸಾಲಪುರಕ್ಕೂ ಅರೇ ಆರು ಮೈಲಿ. ಕಿಶೋರನು ಬಂದೊಡನೆಯೇ ಅನಂಗಮೋಹಿನಿಯನ್ನು ನೋಡಿದನು. ಬಹು ದಿವಸಕ್ಕೆ ಮನೆಗೆ ಬಂದ ಅಳಿಯನನ್ನು ನೋಡಿ, ಅವಳು ಪರಮಾನಂದಭರಿತಳಾದಳು. ಆದರೂ ಇದ್ದಕ್ಕಿದ್ದ ಹಾಗೆ ಹೊತ್ತಲ್ಲದ ಹೊತ್ತಿನಲ್ಲಿ ಅಳಿಯನು ಬಂದುದನ್ನು ನೋಡಿ ಅವಳ ಮನಸ್ಸು ಸ್ವಲ್ಪಕಳವಳಗೊಂಡಿತು. ಬಳಿಕ ಅವನ ವರ್ತಮಾನವನ್ನೆಲ್ಲಾ ತಿಳಿದುಕೊಂಡುದಾಯಿತು. ಬೀಗನಿಗೆ ಸಂಭವಿಸಿರುವ ಆಪತ್ತನ್ನು ಕೇಳಿ ಬಹು ದುಃಖಿಸಿ ತತ್ಕಾಲಕ್ಕೆ ಅನುಗುಣವಾಗಿ ಅಳಿಯನಿಗೆ ಧೈರ್ಯಹೇಳಿ ಸಮಾಧಾನ ಮಾಡಿದಳು. ಅವಳು ಹೇಳಿದಹಾಗೆಲ್ಲಾ ಅಳಿಯನಿಗೆ ಮತ್ತೂ ವ್ಯಸನ ವುಂಟಾಯಿತು. ಆದರೂ ಅದೆಲ್ಲವನ್ನೂ ಸಮಾಧಾನಕ್ಕೆ ತಂದು ಕೊಂಡು ಅತ್ತೆಯನ್ನು ಕುರಿತು—ತಾಯೆ! ನಾಳೆಯೇ ಬೆಳಗ್ಗೆ ನಿಮ್ಮ ಮಗಳನ್ನು ಕಳುಹಿಸಿ ಕೊಡಲಾದೀತೆ? ನನ್ನ ತಂದೆಯು ಸೊಸೆಯನ್ನು ನೋಡಬೇಕೆಂದು ಹಮ್ಮೈಸುತ್ತಿರುವನು. ಈಸಲ ಅವನು ಉಳಿದುಕೊಳ್ಳುವಂತೆ ಇಲ್ಲ. ಸಾಯುವ

ಕಾಲದಲ್ಲಿಯಾದರೂ ಒಂದುಸಾರಿ ಸೊಸೆಯನ್ನುನೋಡಿ ಪ್ರಾಣ ಬಿಡಬೇಕೆಂದು ತಲ್ಲಣಿಸುತ್ತಿದಾನೆ, ಎಂದು ಹೇಳಿದನು.

ಅನಂಗಮೋಹಿನಿಯು ಅದೆಲ್ಲವನ್ನೂ ಕೇಳಿ--ಏತಕ್ಕೆ ಆಗಬಾರದು. ಯಾವುದನ್ನೂ ಯಜಮಾನರಿಗೆ ತಿಳಿಸಿ ಅವರ ಅಭಿಪ್ರಾಯವನ್ನು ತಿಳಿದುಕೊಂಡು ಬರುತ್ತೇನೆ; ಎಂದು ಹೇಳಿ ಅಲ್ಲಿಂದ ಹೊರಟುಹೋದಳು.

## ಮೂರನೆಯ ಪರಿಚ್ಛೇದ.

ರಾತ್ರಿ ಹನ್ನೊಂದು ಗಂಟೆಯ ಸಮಯ. ಎಲ್ಲರಿಗೂ ಊಟವಾಗಿತ್ತು. ದಾಸದಾಸಿಯರೆಲ್ಲಾ ತಮತಮಗೆ ಗೊತ್ತಾಗಿದ್ದ ಸ್ಥಳದಲ್ಲಿ ಮಲಗಿಕೊಂಡಿದಾರೆ. ರಾಮರತ್ನನೂ ತನ್ನ ಶಯನಗೃಹದಲ್ಲಿ ಕುಳಿತುಕೊಂಡಿದಾನೆ. ಯಥಾರೀತಿಯಾಗಿ ಕೈಯಲ್ಲಿ ರುದ್ರಾಕ್ಷಸರ. ಕಣ್ಣುಗಳು ಅರವಾಸಿಮುಚ್ಚಲ್ಪಟ್ಟಿವೆ. ಬಾಯಲ್ಲಿ ಏನೋ ಗೊಣಗುಟ್ಟುತ್ತಿದ್ದನು. ಬಹುಶಃ ದೇವೀ ಧ್ಯಾನಪರನಾಗಿರಬಹುದೆಂದು ತೋರುತ್ತದೆ. ಆಹೊತ್ತಿಗೆ ಅನಂಗಮೋಹಿನಿಯು ಸಡಗರದಿಂದ ಗಂಡನ ಹತ್ತಿರಕ್ಕೆ ಬಂದಳು. ಇವಳು ಬಂದದು ರಾಮರತ್ನನಿಗೆ ಗೊತ್ತಾಯಿತು. ಅವನು ಗಂಭೀರ ಸ್ವರದಿಂದ-ಏನು ? ಎಂದನು.

ಹೆಂಡತಿ-ಅಳಿಯನು ಬಂದಿದಾನೆ.

ಗಂಡ-ಎಲ್ಲರೂ ಕ್ಷೇಮವಷ್ಟೆ ?

ಹೆಂಡತಿ-ಇಲ್ಲ. ಬೀಗರಿಗೇನೋ ಮೈನೆಟ್ಟಗಿಲ್ಲವಂತೆ.

ಗಂಡ-ಹೂಂ.

ಹೆಂಡತಿ-ಈಸಾರಿ ಬಂದಿರುವ ರೋಗದಲ್ಲಿ ಅವರು ಉಳಿದುಕೊಳ್ಳುವುದೇ ಕಷ್ಟವಾಗಿರುವುದಂತೆ.

ಗಂಡ-ಸರಿ

ಹೆಂಡತಿ-ಸರಿಯೇನು ? ಅಳಿಯನ ಮುಖ ಬೆಚ್ಚಿಹಿಡಿದು ಹೋಗಿದೆ.

ಗಂಡ-ಊ ಹೂಂ

ಹೆಂಡತಿ-ಚೆನ್ನಾಗಿದೆ. ನನಗೆ ಗೊತ್ತಾದ್ದನ್ನು ನಾನು ಹೇಳಿದೆ. ನೋಡಿದರೆ ಎಲ್ಲಾ ಗೊತ್ತಾಗುತ್ತದೆ.

ಗಂಡ-ಹಾಗಾದರೆ ತಂದೆಯನ್ನು ಆ ಅವಸ್ಥೆಯಲ್ಲಿ ಬಿಟ್ಟು, ಇಷ್ಟು ಹೊತ್ತಿನಲ್ಲಿ ತಾನು ಮಾತ್ರ ಏಕೆ ಬಂದನು ?

ಇವನ ಆಕ್ರೋಶವನ್ನು ನೋಡಿ ಅನಂಗಮೋಹಿನಿಯು ಯಾವ ವಿಷಯವನ್ನು ಹೇಳಬೇಕೆಂದು ಬಂದಿದ್ದಳೋ, ಆ ಮಾತು ಕುತ್ತಿಗೆಯಲ್ಲಿಯೇ ನಿಂತು ಹೋಯಿತು. ಹಿಂದು ಮುಂದು ನೋಡಲಾರಂಭಿಸಿದಳು. ರಾಮರತ್ನನು ಚತುರ. ಹೆಂಡತಿಯ ಅವಸ್ಥೆಯನ್ನು ನೋಡಿದ ಮಾತ್ರದಿಂದಲೆ ಸಂದರ್ಭವನ್ನು ತಿಳಿದುಕೊಂಡು, ಅವಳನ್ನು ನೋಡಿ ಬೀಗನಿಗೆ ಮರಣಾವಸ್ಥೆಯು ಸಂಭವಿಸಿರುವುದು ಸುಳ್ಳು. ಮುದುಕನಾಗಿರುವುದರಿಂದ ಆಗಾಗ ಹೀಗಾಗುವುದುಂಟು. ಇಷ್ಟಕ್ಕೇ ಗಾಬರಿಬಿದ್ದು ಸೊಸೆಯನ್ನು, ಕರೆದುಕೊಂಡು ಬರಲು ಮಗನನ್ನು ಕಳುಹಿಸಿರುವನು, ಎಂದು ಹೇಳುತ್ತಾ ಸ್ವಲ್ಪ ನಕ್ಕನು. ರಾಮರತ್ನನು ನಕ್ಕುದನ್ನು ನೋಡಿ ಅದೇ ಸಮಯವೆಂದು ಹೆಂಡ

ತಿಯು-ಇಲ್ಲಾ ನಿಜವಾಗಿಯೂ ಈ ಸಾರಿ ಅವರು ಉಳಿದು ಕೊಳ್ಳುವಹಾಗಿಲ್ಲವಂತೆ, ಎಂದಳು.

ರಾಮರತ್ನ-ಹಾಗಾದರೆ ನಾನು ಅಲ್ಲಿಗೆ ಹೋಗಬೇಕೋ?

ಹೆಂಡತಿ-ಇಲ್ಲ, ನೀವು ಅಲ್ಲಿಗೆ ಹೋಗಬೇಕೆಂದಲ್ಲ. ಮೊದಲು ಹೇಳಿದಹಾಗೆ ಮಗಳನ್ನು ಕಳುಹಿಸಿಕೊಡಬೇಕಾದೀತು.

ರಾಮರತ್ನ-ನಿನಗೆ ಹುಚ್ಚು, ಆಚೆಗೆ ಹೋಗು. ಬೀಗನಿಗೆ ಏನೂ ಆಗಿಲ್ಲ. ಅಳಿಯನು ಹೇಳುವುದೆಲ್ಲಾ ಸುಳ್ಳು. ಅದಿರಲಿ. ನೀನು ಇದು ಯಾವುದಕ್ಕೂ ಬರಬೇಡ.

ಗಂಡನ ಮಾತನ್ನು ಕೇಳಿದೊಡನೆಯೇ ಹೆಂಡತಿಗೆ ಸ್ವಲ್ಪ ಕೋಪಬಂದಿತು. ಕೂಡಲೆ ಕೈಯನ್ನೂ ಮುಖವನ್ನೂ ಅಲ್ಲಾಡಿಸುತ್ತಾ-ಸರಿಸರಿ, ಇದೇನಿದು ? ಇದು ಮನುಷ್ಯರು ಮಾಡತಕ್ಕ ಕೆಲಸವೇ ? ಅದರಲ್ಲಿಯೂ ಕುಲಸ್ಥರಾದ ನಮಗೆ ತಕ್ಕುದೇ ?ಎಂದಳು.

ರಾಮರತ್ನನು ಹೆಂಡತಿಯ ಕ್ರೋಧೋದ್ದೀಪಿತವಾದ ಮಾತುಗಳನ್ನು ಕೇಳಿ, ಅವಳಿಗೆ ತಕ್ಕ ಉತ್ತರವನ್ನು ಕೊಡಬೇಕೆಂದು ಯೋಚಿಸುತ್ತಿರುವಷ್ಟರಲ್ಲಿಯೇ, ಅಳಿಯ ಬಂದು ಮಾವನ ಕಾಲುಗಳ ಮೇಲೆ ಬಿದ್ದನು. ಆಗ ರಾಮರತ್ನನು ಅಳಿಯನನ್ನು ಕುರಿತು—ನಿನ್ನ ತಂದೆಗೆ ಈಗ ಹೇಗಿದೆ ? ಎಂದು ಕೇಳಿದನು. ಈ ಮಾತನ್ನು ಕೇಳುತಲೆ ಕಾಳೀಕಿಶೋರನ ಕಣ್ಣುಗಳಿಂದ ನೀರು ಸುರಿಯುವುದು ಹೆಚ್ಚಾಯಿತು. ಮಾತೇ ಹೊರಡಲಿಲ್ಲ. ಆದರೂ ಬಹು ಕಷ್ಟದಿಂದ—ಈಸಾರಿ ನನ್ನ ತಂದೆಯು ಉಳಿಯುವ ಆಶೆ ಬೇರೆಇಲ್ಲ. ವೈದ್ಯರ ಚಿಕಿತ್ಸೆಯೆಲ್ಲಾ

ವಿಫಲವಾಯಿತು. ಹಾಗೇನಾದರೂ ದೈವಯತ್ನದಿಂದ ಬದುಕಿದರೆ, ತಾಯಿಯ ಹೊಟ್ಟೆಯಲ್ಲಿ ಮತ್ತೆ ಹುಟ್ಟಿದ ಹಾಗೆಯೇ ಸರಿ, ಎಂದು ಹೇಳಿ ಮಕ್ಕಳಿಗಿಂತಲೂ ಹೆಚ್ಚಾಗಿ ಇನ್ನೂ ಅಳತೊಡಗಿದನು. ಇದನ್ನು ನೋಡಿ ರಾಮರತ್ನನ ಮುಖವೂ ಬಾಡಿತು- ಅನಂಗಮೋಹಿನಿಗಂತೂ ಮನಸ್ಸು ಕರಗಿ ಬಹುವಾಗಿ ಶೋಕಿಸಿದಳು. ಆ ಬಳಿಕ ರಾಮರತ್ನನು—ಹಾಗಾದರೆ ಆಯವಸ್ಥೆಯಲ್ಲಿರುವ ಅವನನ್ನು ಬಿಟ್ಟು ನೀನು ಹೇಗೆಬಂದೆ? ಎಂದು ಕೇಳಿದನು.

ಕಾಳೀಕಿಶೋರ-ನಾನೇನೂ ಇಲ್ಲಿಗೆ ಸುಮ್ಮನೆ ಬರಲಿಲ್ಲ. ನನ್ನ ತಂದೆಗೆ ತನ್ನ ಸೊಸೆಯನ್ನು ನೋಡಬೇಕೆಂಬ ಕುತೂಹಲವು ಹೆಚ್ಚಾಗಿದೆ. ಆದುದರಿಂದ ಅಲ್ಲಿಗೆ ಕರೆದುಕೊಂಡು ಹೋಗಬೇಕೆಂದು ಬಂದೆ.

ರಾಮರತ್ನ-ಹಾಗೆಯೇ! ಸರಿ, ಆಗಬಹುದು. ಆದರೆ ಮಗಳನ್ನು ಮಾವನ ಮನೆಗೆ ಕಳುಹಿಸುವುದಕ್ಕೆ ಒಳ್ಳೇ ಸಮಯ! ಚೆನ್ನಾಗಿದೆ.

ಕಾಳೀಕಿಶೋರ-(ವ್ಯಸ್ತನಾಗಿ) ಲೋಕದಲ್ಲಿ ಜನರು ಮಕ್ಕಳುಮರಿಗಳನ್ನು, ನೆಂಟರಿಷ್ಟರನ್ನು ನೋಡುವುದಕ್ಕೆ ಅಪೇಕ್ಷಿಸುವುದು ಇಂತಹ ಸಮಯದಲ್ಲಿಯೇ.

ಹೀಗೆಯೇ ಮಾವ ಅಳಿಯಂದಿರಿಗೆ ಒಂದೆರಡು ಮಾತುಗಳು ನಡೆದವು. ಆಮೇಲೆ ರಾಮರತ್ನನು ನಿಸ್ಸಂಕೋಚವಾಗಿ- ಲೋಕದಲ್ಲಿ ಬೇಕಾದವರು ಬೇಕಾದಂತೆ ಅಭಿಪ್ರಾಯಪಟ್ಟುಕೊಳ್ಳಲಿ. ಆ ಅಭಿಪ್ರಾಯಗಳಿಗೆಲ್ಲಾ ನಾನು ಹೆದರುವುದಿಲ್ಲ.

ಏನೇ ಆಗಲಿ, ಇಂತಹ ಸಮಯದಲ್ಲಿ ನನ್ನ ಮಗಳನ್ನು ನಾನು ಕಳುಹಿಸಲಾರೆ, ಎಂದು ಹೇಳಿಬಿಟ್ಟನು.

ಈ ಮಾತನ್ನು ಕೇಳಿದೊಡನೆಯೇ ಕಾಳೀಕಿಶೋರನು ಕುಗ್ಗಿ ಹೋದನು. ಆವನ ಸ್ಥೈರ್ಯವೆಲ್ಲಾ ಹೋಯಿತು. ಅವನ ಕುತೂಹಲವೂ ಹಾಳಾಯಿತು. ಮಾವನು ಹೀಗೆ ಹೇಳಿಬಿಡು ವನೆಂದು ಅವನು ಕನಸ್ಸಿನಲ್ಲಿಯೂ ಕಂಡಿರಲಿಲ್ಲ. ಹಾಗಿದ್ದಿದ್ದರೆ ತಂದೆಯ ಮಾತಿನಂತೆ ಇಲ್ಲಿಗೆ ಬರುತ್ತಲೇ ಇರಲಿಲ್ಲ. ತನ್ನ ತಂದೆಯು ಸೊಸೆಯನ್ನು ನೋಡುವುದಕ್ಕೆ ಅಪೇಕ್ಷಿಸುತ್ತಾ ನೆಂಬುದನ್ನು ಚೆನ್ನಾಗಿ ತಿಳಿದಿದ್ದನು. ತನ್ನ ಮಾವನ ಪೌರಾ ತ್ಮ್ಯದ ವಿಚಾರದಲ್ಲಿ ಒಂದೊಂದು ವೇಳೆ ತಂದೆಯು ಸಿಮರ್ಮಾ ಹತನಾಗುತ್ತಿದ್ದುದನ್ನೂ ತಿಳಿದಿದ್ದನು. ಹೀಗಿದ್ದರೂ ತಂದೆಯು ಸೊಸೆಯನ್ನು ನೋಡಬೇಕೆಂದು ಬಯಸಿದರೆ, ಅದು ಈಡೇ ರಲಿಲ್ಲವಲ್ಲಾ, ಎಂದು ಬಹಳವಾಗಿ ಯೋಚಿಸಿ, ಕೊನೆಗೆ ಧೈರ್ಯ ವನ್ನು ತಂದುಕೊಂಡು ಮಾವನನ್ನು ನೋಡಿ-ಏನೀವಾದುಗ ಳಿಂದ ನನಗೇನೂ ಪ್ರಯೋಜನವಿಲ್ಲ. ಈಗ ತಮ್ಮ ಮಗ ಳನ್ನು ಅವಳ ಗಂಡನ ಜತೆಯಲ್ಲಿ ಅವಳ ಮಾವನ ಮನೆಗೆ ಕಳುಹಿಸಿಕೊಡುವುದಕ್ಕೆ ತಮಗೆ ಇಷ್ಟವುಂಟೇ, ಇಲ್ಲವೇ ?

ಎಂದನು.

ರಾಮರತ್ನ-ಮಾತುಗಳನ್ನು ಬೆಳೆಯಿಸುವುದರಿಂದ ನನ ಗೂ ಪ್ರಯೋಜನವಿಲ್ಲ. ನನಗೊಬ್ಬಳೇ ಮಗಳು, ಮತ್ತಾರೂ ಇಲ್ಲ. ನನಗೆ ಅವಳೇ ಉತ್ತರಾಧಿಕಾರಿಣಿಯು. ಅವಳು ಅವಳ

ಗಂಡನ ಮನೆಗೆ ಹೋಗದೇ ಇಲ್ಲೇ ಇದ್ದುಬಿಟ್ಟರೂ, ಅವಳಿಗೇನೂ ಕೊರತೆಯಾಗಲಾರದು.

ಅನಂಗಮೋಹಿನಿಗಂತೂ ದಿಕ್ಕೇ ತೋರಲಿಲ್ಲ. ಆಕೆಯು ಚಿತ್ರದ ಬೊಂಬೆಯಂತೆ ಅಲುಗಾಡದೇ ನಿಂತುಬಿಟ್ಟಳು.

ಕಾಳೀಕಿಶೋರನು ನಿರಾಶನಾಗಿ–ತಮ್ಮ ಇಷ್ಟವಿದ್ದಂತೆ ಮಾಡಬಹುದು. ಅದಕ್ಕೆ ಪ್ರತ್ಯುತ್ತರವನ್ನು ಕೊಡಲು ಕರ್ತನು ನಾನಲ್ಲ, ಎಂದು ಹೇಳಿ ಕೂಡಲೆ ಅಲ್ಲಿಂದ ಹೊರಟು ಹೊರಗೆ ಬಂದು ಬಿಟ್ಟನು. ಆ ಹೊತ್ತಿಗೆ ಸರಿಯಾಗಿ, ಅಲ್ಲೆ ಮಗ್ಗುಲಲ್ಲಿರುವ ಒಂದು ಕೋಣೆಯಲ್ಲಿದ್ದ ಒಬ್ಬ ಯುವತಿಯು ಕೈ ನೀಡಿ ಸಂಜ್ಞೆ ಮಾಡಿದಳು. ಅಕಸ್ಮಾತ್ತಾಗಿ ಕಾಳೀಕಿಶೋರನು ಅದನ್ನು ನೋಡಿದನು. ನೋಡಿದವನು ಹೋಗದೇ ಇರಲಿಲ್ಲ. ಕೋಣೆಗ ಹೋದನು.

ಅಳಿಯನು ಕೋಪದಿಂದ ಹೀಗೆ ಹೊರಟುಹೋದುದನ್ನು ನೋಡಿ, ಅನಂಗಮೋಹಿನಿಯು ಅಪ್ರತಿಭಳಾಗಿ ಗಂಡನನ್ನು ಕುರಿತು–ಅದೇಕೆ, ಮಗಳನ್ನು ಗಂಡನ ಮನೆಗೆ ಕಳುಹಿಸಕೂಡದು ? ಪಾಪ ! ಅಳಿಯನು ಬಹಳ ಕೋಪದಿಂದ ಹೊರಟು ಹೋದನು. ಅವನಿಗೂ ಬಹು ದುರ್ದಶೆಯು ಬಂದೊದಗಿದೆ. ಮಗಳು ಬಹುಕಾಲ ತಂದೆಯ ಮನೆಯಲ್ಲಿಯೇ ಇರುತ್ತಿದ್ದರೆ ಲೋಕದಲ್ಲಿ ಜನರೇನೆಂದುಕೊಂಡಾರು ? ಎಂದು ಹೇಳುತ ಹೇಳುತ ಗಳಗಳನೆ ಅಳತೊಡಗಿದಳು. ಮುಖವು ಕೆಂಪೇರಿತು. ಕೋಪವೂ ಮಿತಿ ಮೀರಿತ್ತು.

ಹೆಂಗಸರ ಈ ಗೊಡ್ಡ ಬೆದರಿಕೆಗೆಲ್ಲಾ ರಾಮರತ್ನನು

ಹೆದರತಕ್ಕವನೇ! ಆತನು ಹೆಂಡತಿಯ ಈ ಸ್ಥಿತಿಯನ್ನು ನೋಡಿ,ಮತ್ತೂ ಕೋಪದಿಂದ-ಲೋಕದ ಜನರ ಪೊಳ್ಳು ಹರಟೆಗಳನ್ನು ರಾಮರತ್ನನು ಲೆಕ್ಕಿಸತಕ್ಕವನಲ್ಲ. ಅಳಿಯನಿಗೆ ಕೋಪಬಂದರೆ ಬರಲಿ, ಹೋದರೂ ಹೋಗಲಿ, ನನಗೇನೂ ನಷ್ಟವಿಲ್ಲ. ಬಂದೇ ಬಂದು ಮಗುವನ್ನು ಸಾಕಿ ಕಂಡವನ ಮನೆಗೆಕಳುಹಿಸಿ ಬಿಡುವುದೆಂದರೆ ನನಗೆ ಮನಸ್ಸು ಬರುವು ದಿಲ್ಲ, ಇದರಿಂದ ಆಗತಕ್ಕುದೆಲ್ಲಾ ಆಗಲಿ. ನಾನು ನೋಡಿ ಕೊಳ್ಳುತ್ತೇನೆ, ಎಂದು ಹೇಳಿಬಿಟ್ಟನು.

---

## ನಾಲ್ಕನೆಯ ಪರಿಚ್ಛೇದ.

ಕಾಳೀಕಿಶೋರನು ಹೊರಗೆ ಬಂದು ಬಿಟ್ಟನೆಂಬುದೂ, ಅದೇಸಮಯದಲ್ಲಿ ಒಬ್ಬ ತರುಣಿಯು ಕೈಸನ್ನೆಯಿಂದ ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡನೆಂಬುದೂ, ಗೊತ್ತೇ ಇದೆಯಷ್ಟೆ. ಪಾಠಕರಿರಾ! ಅದನ್ನು ದಯೆಯಿಟ್ಟು ಸ್ಮರಿಸಿಕೊಳ್ಳಿರಿ. ಆ ಯುವತಿಯು ಇನ್ನಾರೂ ಹೊರಗಿನವಳಲ್ಲ. ಹೊರಗಿನವಳಾ ಗಿದ್ದಿದ್ದರೆ ಯೋಗ್ಯನಾದ ಕಾಳೀಕಿಶೋರನು ಅಲ್ಲಿಗೆ ಹೋಗು ತ್ತಿದ್ದನೆ? ಇಲ್ಲ, ಎಂದಿಗೂ ಇಲ್ಲ. ಅವಳು ಅವನ ಪತ್ನಿಯಾದ ವಿಯೋಗಿನಿಯೇ. ಆದುದರಿಂದಲೇ ಅವನು ಅಲ್ಲಿಗೆ ಹೋದುದು. ಆವಾಗ ಅವನು ಅಲ್ಲಿಗೆ ಹೋದನೋ, ಆಗ ವಿಯೋಗಿನಿಯು ಗಂಡನ ಕೈಯನ್ನು ಹಿಡಿದುಕೊಂಡು-ಇದೇನು ? ನಿಮಗೇನು ಹುಚ್ಚು ಹಿಡಿಯಿತೇ ? ಎಂದು ಕೇಳಿದಳು.

ಕಾಳೀಕಿಶೋರ-ನಿಮ್ಮ ಮನೆಗೆ ಬಂದ ಮೇಲೆ ಹುಚ್ಚು ಹಿಡಿಯದೇ ಇದ್ದೀತೆ? ನಿನ್ನ ತಂದೆಯು ಆಡಿದ ಮಾತುಗಳೆಲ್ಲ ವನ್ನೂ ಕೇಳಿದೆಯ ? ಆ ಮಾತನ್ನು ಕೇಳಿದ ಯಾವ ಮನುಷ್ಯ ನಿಗೆ ತಾನೇ ಹುಚ್ಚು ಹಿಡಿಯದೇ ಇದ್ದೀತು ?

ವಿಯೋಗಿನಿ-ಸರಿ, ಎಷ್ಟೇ ಆದರೂ ನಿಮ್ಮಂತಹರೇ ಈರೀತಿ ಕೋಪಮಾಡಿಕೊಂಡರೆ ಹೇಳತಕ್ಕದೇನು ? ಅದೂ ತಂಗೆ ಮಾವ ಇಂತವರಲ್ಲಿ !

ಕಾಳೀಕಿಶೋರನು ಹೊರಡುವುದಕ್ಕೆ ಸಿದ್ಧನಾದನು. ಹೆಂ ಡತಿಯು ಬಿಡಲಿಲ್ಲಾ. ಕೈ ಹಿಡಿದು ಬಲಾತ್ಕಾರದಿಂದ ಮಂಚದ ಮೇಲೆ ಕುಳ್ಳಿರಿಸಿ, ಬೀಸಣಿಗೆಯಿಂದ ಬೀಸುತ್ತಾ ಉಪಚರಿಸ ತೊಡಗಿದಳು. ಇದಾವುದೂ ಅವನಿಗೆ ರುಚಿಸಲಿಲ್ಲ. ಆದರೂ ಅವನ ಕೋಪಾಗ್ನಿಯು ಕೊಂಚ ನಂದಿತು. ಪ್ರಪಂಚದ ಮಾಯೆಯೇ ಹೀಗೆ. ಎಂತಹ ವೀರನೇ ಆಗಲಿ, ಧೀರನೇ ಆಗಲಿ, ಹಠವಾದಿಯೇ ಆಗಲಿ, ಅಬಲೆಯರಿಗೂ ಸೋತೇ ಸೋಲುವನು. ಹಾಗೆಯೇ ಕಾಳೀಕಿಶೋರನು ಸ್ವಲ್ಪ ಶಾಂತ ನಾಗಿ-ನೋಡು ನಿನ್ನ ತಂದೆಯು ನಿನ್ನನ್ನು ಕಳುಹಿಸಿಕೊಡುವು ದಿಲ್ಲವಂತೆ. ಇದೆಲ್ಲವನ್ನೂ ನೀನು ಕೇಳಿಸೆಯಷ್ಟೆ ? ಅದಕ್ಕೆ ನೀನೇನು ಹೇಳುತ್ತೀಯೆ? ಎಂದನು.

ವಿಯೋಗಿನಿ-ನಾನೇನು ಮಾಡಲಿ ?

ಕಾಳೀ-ಸಾಧ್ವೀ ಶಿರೋಮಣಿಗಳು ಮಾಡಬೇಕಾದುದಾ ವುದೋ ಅದು ನಿನಗೆ ಗೊತ್ತಿದ್ದರೆ, ಈ ಸಮಯದಲ್ಲಿ ಏನು

ಮಾಡಬೇಕೋ ಅದನ್ನು ನೀನೇಬಲ್ಲೆ. ಬಳ್ಳಿಯದು. ನನ್ನೊಡನೆ ಬರುವುದಕ್ಕೆ ನಿನಗೇನು ಅಡ್ಡಿ ?

ವಿಯೋಗಿನಿಗ ಏನೂ ತೋಚಲಿಲ್ಲ. ಕಡೆಗ ಬಲು ಹೊತ್ತಿನಮೇಲೆ—ಹಾಗೋ ಸರಿ, ನಾನು ಹೇಗತಾನೇ ಬರಬಲ್ಲೆ ? ಎಂದಳು

ಕಾಳೀ-ಹೇಗೆತಾನೆ ಬರಲಾರೆ ?

ವಿಯೋಗಿನಿ-ನಾನು ಇನ್ನೂ ತಂದೆಗೆ ಅಧೀನಳಾಗಿಯೇ ಇರುವೆನು. ತಾವು ಹೇಳಿದಹಾಗೆ ಬಂದುಬಿಟ್ಟರೆ ಅವನೇನೆಂದುಕೊಂಡಾನು ? ಜನರು ತಾನೇ ಏನೆಂದುಕೊಂಡಾರು ?

ಕಾಳೀ-ಪತಿವ್ರತೆಯೆಂದು.

ವಿಯೋಗಿನಿ-ಇದಕ್ಕಿಂತಲೂ ನನಗೆ ಬೇಕಾದುದು ಇನ್ನಾವುದು ? ಆದರೆ ನಾನು ಬಂದುಬಿಟ್ಟರೆ, ನನ್ನ ತಂದೆಯು ಸಂಕಟಪಟ್ಟುಕೊಳ್ಳುವನು. ಆಮೇಲೆ ಜನರಿಗೆ ಮುಖವನ್ನು ತೋರಿಸುವುದಕ್ಕೆ ನನಗೆ ಬಲು ನಾಚಿಕೆಯಾಗುವುದಲ್ಲ ?

ಕಾಳೀ—ನೀನು ಬರದೇಇದ್ದರೆ ನನ್ನ ತಂದೆಯು ಮಾತ್ರ ಸಂಕಟಪಟ್ಟುಕೊಳ್ಳುವುದೇ ಇಲ್ಲವೋ ? ಆಗ ಜನಗಳಿಗೆ ಮುಖವನ್ನು ತೋರಿಸುವುದಕ್ಕೆ ನನಗೆ ಮಾತ್ರ ನಾಚಿಕೆಯಾಗಲಾರದೋ ? ಸಾವಿರಾರು ಮಾತುಗಳೇಕೆ ? ನಾನು ಹೇಳುವುದು ಇಷ್ಟೇ. ಗಂಡನ ಜತೆಯಲ್ಲಿ ಬಂದರೆ ನಿನ್ನ ಗೌರವಕ್ಕೇನೂ ಕುಂದಕವಿಲ್ಲ. ಇದನ್ನು ನೀನು ತಿಳಿದುಕೊಂಡಿದ್ದರೆ ನನ್ನೊಡನೆ ಬಾ. ಇಲ್ಲದಿದ್ದರೆ ನಿನ್ನ ಇಷ್ಟ, ಹೀಗೆ ಹೇಳಿ ಕಾಳೀಕಿಶೋರನು ಮೇಲಕ್ಕೆ ಎದ್ದನು. ಎದ್ದವನು

ಅಲ್ಲಿ ನಿಲ್ಲಲಿಲ್ಲ. ಹೊರಟೇ ಹೊರಟನು. ವಿಯೋಗಿನಿಯು ಅವನನ್ನು ಬಿಡಲಿಲ್ಲ. ಅವನ ಚರಣ ಪ್ರಾಂತದಲ್ಲಿ ಬಿದ್ದು ಅಳತೊಡಗಿದಳು. ಅತ್ತು ಅತ್ತು ಸಾಕಾಯಿತು. ಬರೀ ಅಳುವಿನಿಂದೇನು ? ಆಗ ಮತ್ತೆ ಗಂಡನನ್ನು ಕುರಿತು—ನಾಥ! ಹೋಗಬೇಡ. ನನ್ನ ಮಾತನ್ನು ಸ್ವಲ್ಪ ಕೇಳು. ಇನ್ನೊಂದು ಸಲ ನನ್ನ ತಂದೆಗೆ ಈ ವಿಷಯವನ್ನು ತಿಳಿಸಿ ನೋಡ ಬಾರದೇ? ಎಂದಳು.

ಕಾಳೀ-ಮತ್ತೆ ಅವನನ್ನು ನಾನು ಕೇಳತಕ್ಕವನಲ್ಲ. ಹಾಗೆ ಬೇಕಾದರೆ ನೀನೇ ಹೋಗಿ ಕೇಳಿಕೋ.

ವಿಯೋಗಿನಿ—ನಾನೇ ಹೋಗಿ ಈ ವಿಷಯವನ್ನು ಕೇಳು ವುದಕ್ಕೆ ನನಗೇ ಬಲು ನಾಚಿಕೆಯಾಗುತ್ತದೆ.

ಕಾಳೀ-ಹಾಗಾದರೆ ನಿನ್ನ ಇಷ್ಟ. ಇನ್ನು ಹೆಚ್ಚು ಹೇಳ ಲಾರೆನು. ನೀನು, ನೀನು ನನಗೆ ನಿಜವಾದ ಹೆಂಡತಿಯೇ ಆಗಿದ್ದ ಪಕ್ಷದಲ್ಲಿ, ಯಾವ ಮಾತನ್ನೂ ಆಡದೆ ಈ ಕೂಡಲೇ ನನ್ನೊಡನೆ ಬಾ.

ವಿಯೋಗಿನಿ-ಸ್ವಾಮಿ ! ನೀನೇ ನನಗೆ ಸ್ವಾಮಿ. ಇಹ ಪರಗಳೆರಡರಲ್ಲಿಯೂ ನೀನೇ ನನಗೆ ಗತಿ. ನಿನ್ನೊಡನೆ ಬರುವು ದಕ್ಕೆ ಬಾಧಕವೇನು ? ಆದರೆ, ಹೇಗೆ ತಾನೆ ಬರಲಿ ? ಈ ಸಂದರ್ಭದಲ್ಲಿ ಬರುವುದಕ್ಕೇನೋ ನನಗೆ ಬಲು ನಾಚಿಕೆ ಯಾಗುತ್ತದೆ.

ಕಾಳೀ-ಹಾಗಾದರೆ ಆ ನಾಚಿಕೆಯನ್ನೇ ನಂಬಿಕೊಂಡು ನಿನ್ನ ತೌರುಮನೆಯಲ್ಲಿಯೇ ಚೆನ್ನಾಗಿ ಬಾಳು.

ಹೀಗೆ ಹೇಳಿ ಕಾಳೀಕಿಶೋರನು ಕಾಲು ತೆಗೆದನು. ವಿಯೋಗಿನಿಯು ಅವನ ಕಾಲುಗಳನ್ನು ಬಿಡದೆ-ಹೊರಟೇ ಹೋಗುವಿರಲ್ಲ! ಈ ರಾತ್ರಿಯಾದರೂ ಇದ್ದು ಹೋಗ ಬಾರದೇ ? ಎಂದಳು.

ಕಾಳಿ-ಚೆನ್ನಾಗಿ ಹೇಳಿದೆ! ನನ್ನ ತಂದೆಯು ಈಗಲೋ, ಇನ್ನೊಂದು ಗಳಿಗೆಗೋ ಎನ್ನುವ ಹಾಗೆ ಇದ್ದಾನೆ. ನಿನ್ನನ್ನು ನೋಡುವುದಕ್ಕಾಗಿಯೇ ಜೀವವನ್ನು ಬಿಗಿ ಹಿಡಿದು ಕೊಂಡಿ ದ್ದಾನೆ. ಇಂತದರಲ್ಲಿ ನೀನೂ ನನ್ನನ್ನು ಬಲಾತ್ಕರಿಸುತ್ತೀಯಾ? ಅಯ್ಯೋ !ಈ ಸಮಯದಲ್ಲಿ ನನಗೆ ಯಾರೂ ಸಹಾಯರಿಲ್ಲವೆ? ಇದೋ ನೋಡು, ಈಗಲೆ ನನ್ನೊಡನೆ ಬರುವುದಾದರೆ ಕತ್ತಲ ಯಾಗಿರುವುದರಿಂದ ಯಾವ ಅಡ್ಡಿಯೂ ಇಲ್ಲದಂತೆ ಕರೆದು ಕೊಂಡು ಹೋಗಬಲ್ಲೆನು.

ವಿಯೋಗಿನಿ-ಅದೇನೋ ಅನುಕೂಲವೇ ಸರಿ, ಆದರೆ-

ಕಾಳೀ-ನಾಚಿಕೆಯಂತೆ ನಾಚಿಕೆ. ನಿನ್ನ ನಾಚಿಕೆಯನ್ನು ಸುಟ್ಟರು.

ಹೀಗೆ ಹೇಳಿ ಬಲಾತ್ಕಾರದಿಂದ ಕಾಲುಗಳನ್ನು ಬಿಡಿಸಿ ಕೊಂಡು ಉನ್ಮತ್ತನಂತೆ ಹೊರಟೇ ಹೋದನು. ವಿಯೋಗಿ ನಿಯು ಹಾಗೆಯೇ ನೆಲದಮೇಲೆ ಬಿದ್ದುಬಿಟ್ಟಳು.

# ಐದನೆಯ ಪರಿಚ್ಛೇದ.

ಕಾಳೀಕಿಶೋರನ ಮುಖವನ್ನು ಹಾಗೆಯೇ ನೋಡಿರಿ. ಆಗ್ರಹವು ತುಂಬಿ ತುಳಕಾಡುತ್ತಿದೆ. ಹಾಗೆಯೇ ಇನ್ನೂ ಚೆನ್ನಾಗಿ ನೋಡಿರಿ. ಅಗಾಧವಾದ ವ್ಯಸನ ಸಮುದ್ರದಲ್ಲಿ ಮುಳುಗಿ ಹೋಗಿರುವಂತೆ ಕಾಣುತ್ತದೆ. ಎಷ್ಟೇ ವ್ಯಸನವೇ ಆಯಿತು, ಅವನೇನನ್ನು ತಾನೆ ಮಾಡಬಲ್ಲನು ? ಯಾರುತಾನೆ ಅವನ ಸಂಕಟವನ್ನು ಹೋಗಲಾಡಿಸಿಯಾರು? ಏನೋ ಹಾಗೂ ಹೀಗೂ ಬೆಳಗಿನ ಜಾವಕ್ಕೆ ಸರಿಯಾಗಿ ಅವನು ಮನೆಗೆ ಬಂದು ಸೇರಿದನು. ಬಂದವನು ತಂದೆಯ ಬಳಿಗೆ ಹೋಗಿ ತಡಮಾಡದೆ ತನ್ನ ಮಾವನ ಮನೆಯಲ್ಲಿ ನಡೆದ ಸಂಗತಿಗಳನ್ನೆಲ್ಲಾ ತಿಳಿಸಿದನು. ಕೂಡಲೇ ವಾಸುದೇವ ಶರ್ಮನಿಗೆ ಶ್ವಾಸವೂ ಊರ್ಧ್ವಮುಖವಾಯಿತು. ಅವನ ದೃಷ್ಟಿಯು ನಿಶ್ಚಂಚಲವಾಗಿ ಶೂನ್ಯದೇಶವನ್ನೇ ನೋಡುತ್ತಿದ್ದಿತು.

ಗ್ರಾಮದಲ್ಲಿ ಆಬಾಲವೃದ್ಧರೂ ವಾಸುದೇವ ವಿದ್ಯಾಭೂಷಣನನ್ನು ತಂದೆಯಂತೆಯೇ ಪ್ರೀತಿಸುತಲಿದ್ದರು. ಆ ಕಾರಣದಿಂದ ಅವನ ಅವಸಾನ ಕಾಲದಲ್ಲಿ ಎಲ್ಲರೂ ನೋಡಲು ಬಂದಿದ್ದರು. ಬಳಿಕ ಅವನ ಅವಸ್ಥೆಯನ್ನು ನೋಡಿ ಎಲ್ಲರಿಗೂ ಬಹು ವ್ಯಸನವಾಯಿತು. ಯಾರ ಮುಖದಲ್ಲಿಯೂ ಸಂತೋಷದ ಗುರುತೇ ಇಲ್ಲ. ವಿದ್ಯಾಭೂಷಣನ ಮನೆಯೆಲ್ಲಾ ಜನಗಳ ಕಣ್ಣೀರಿನಿಂದ ತೊಯಿದು ಹೋಗಿದ್ದಿತು. ವಾಸುದೇವನು ನಿಮಿಷದಲ್ಲಿಯೇ ಇಹಲೋಕದಿಂದ ಮುಕ್ತನಾಗಿ

ಹೋದನು. ಉತ್ತರ ಕ್ರಿಯೆಗಳೆಲ್ಲಾ ನಡೆದು ಹೋದವು. ವಿದ್ಯಾಭೂಷಣನು ತನ್ನ ಜೀವಿತಕಾಲದಲ್ಲಿ ಗಳಿಸಿ ಇಟ್ಟಿದ್ದ ಸ್ವತ್ತಿಗೆ ಕಾಳೀಕಿಶೋರನೇ ಉತ್ತರಾಧಿಕಾರಿ. ಕಾಳೀಕಿಶೋರ ನಿಗೆ ಸಂಸಾರದಲ್ಲಿ ಬಲು ಬೇಸರವಾಗಿ, ತನ್ನ ಆಸ್ತಿಯ ನ್ನೆಲ್ಲಾ ಮಾರುವುದಕ್ಕೆ ತೊಡಗಿ ಎಲ್ಲವನ್ನೂ ಮಾರಿ ಬಂದ ಹಣವನ್ನೆಲ್ಲಾ ಸತ್ಪಾತ್ರದಲ್ಲಿ ವಿನಿಯೋಗಿಸಿ ಸನ್ಯಾಸವನ್ನು ತೆಗೆದುಕೊಂಡು ಸಂಸಾರ ಬಂಧದಿಂದ ಮುಕ್ತನಾಗಬೇಕೆಂದು ನಿಶ್ಚಯಿಸಿಕೊಂಡನು. ಇದಕ್ಕೆ ಕಾರಣವನ್ನು ಪಾಠಕರೇ ಗೊತ್ತು ಮಾಡಿಕೊಳ್ಳಬಹುದು. ಕಿಶೋರನಿಗೆ ಸಂಭವಿಸಿರುವ ಮನಸ್ಸಿನ ಉದ್ವೇಗವನ್ನು ತಿಳಿದು ಅವನ ಪರಮ ಸ್ನೇಹಿತ ನೊಬ್ಬನು ಬಂದು-ಕಿಶೋರ, ಇದೇನು ಕೆಲಸಕ್ಕೆ ಉಜ್ಜುಗಿ ಸಿದೆ? ನಿನಗೆ ಅಂತಹ ಕಷ್ಟವೇನು ಬಂದಿತು? ಎಂದು ಕೇಳಿದನು.

ಇನ್ನಾರಾದರು ಹೀಗೆ ಕೇಳಿದ್ದರೆ ಕಿಶೋರನು ಸರಿಯಾದ ಉತ್ತರವನ್ನು ಕೊಡುತಿರಲಿಲ್ಲ. ಈಗ ಕೇಳಿದ ಸ್ನೇಹಿತನಲ್ಲಿ ಬಹು ವಿಶ್ವಾಸವಿಟ್ಟಿತಾದಕಾರಣ, ಅವನೊಡನೆ ಯಾವುದನ್ನೂ ಮರೆಮಾಚದೇ—ಪ್ರಭಾತ, ಏನೇನಾಗಬೇಕೆಂದು ವಿಧಾತನು ಸಂಕಲ್ಪಿಸಿರುವನೋ ಅದದು ನಡದೇ ಹೋಗುವುದು. ಅದನ್ನು ಯಾರೂ ತಪ್ಪಿಸಲಾರರು. ನನಗೆ ಸಂಸಾರದಲ್ಲಿ ಸುಖವಿಲ್ಲದೇ ಹೋಯಿತು. ನನ್ನ ತಂದೆಯು, ಅಂಥಾ ನನ್ನ ತಂದೆಯು, ಸಾಯುವ ಕಾಲದಲ್ಲಿ ತನ್ನ ಸೊಸೆಯನ್ನು ನೋಡಬೇಕೆಂದು ಬಯಸಿದನು. ಅದಕ್ಕಾಗಿ ನಾನು ಬಹು ಪ್ರಯತ್ನವನ್ನು ಮಾಡಿ

ದರೂ ಅವನ ಕೋರಿಕೆಯನ್ನು ಪೂರಯಿಸಲಾರನೇ ಹೋದೆನು. ಅಂತಹ ಸಮಯಕ್ಕೆ ಒದಗದೇ ಇದ್ದ ನನ್ನ ಸಂಸಾರದಲ್ಲಿ ನನಗೆ ಇನ್ನೂ ಸುಖವುಂಟೆ? ಹಾಗೆ ಸುಖವು ತಾನೆ ಉಂಟಾಯಿತು, ಆ ಸುಖವು ನನಗೆ ಬೇಡ, ಸಾಕು; ಈ ಲೋಕದ ಬಾಳೊಂದು ಬಾಳೆ? ಎಂದನು.

ಪ್ರಭಾತ-ಹಾಗಾದರೆ ನಿನ್ನ ಹೆಂಡತಿಯ ಗತಿ?

ಕಾಳೀ-ಯಾವದಿನ ನನ್ನ ಹೆಂಡತಿಯು ನಾಚಿಕೆಯ ನೆಪದಿಂದ ನನ್ನ ಮಾತನ್ನು ತೃಣೀಕರಿಸಿ ಬಿಟ್ಟಳೋ, ಆ ದಿನವೇ ಮನಸಾ ನಾನು ಸನ್ಯಾಸಿಯಾದೆನು. ಇನ್ನು ನನಗೆ ಹೆಂಡತಿಯಾರು?

ಪ್ರಭಾತ-ನಿನಗೆ ಹುಚ್ಚು ಹಿಡಿದಿದೆ. ಎಲ್ಲರೂ ಹೀಗೆಯೇ ಸಂಸಾರಧರ್ಮವನ್ನು ತ್ಯಾಗಮಾಡಿದರೆ, ಗೃಹಸ್ಥಾಶ್ರಮ ಧರ್ಮವನ್ನು ಪರಿಪಾಲನೆ ಮಾಡುವರಾರು?

ಕಾಳೀ-ನನಗೆ ನೀನು ಆವುದನ್ನೂ ಹೇಳಬೇಡ. ಸಂಸಾರದಲ್ಲಿ ಬೇಸರವುಂಟಾದ ಮೇಲೆ ನನಗೆ ಸಂಸಾರ ಬೇಡ.

ಪ್ರಭಾತ-ನಿನಗೆ ಸಂಸಾರದಲ್ಲಿ ಇಷ್ಟು ವಿರಕ್ತಿಗೆ ಏನು ಕಾರಣ? ನಿನ್ನ ಹೆಂಡತಿಯು ತಾನೆ ಏನು ಮಾಡಬಲ್ಲಳು? ಇಷ್ಟಕ್ಕೂ ಅವಳ ಅಪರಾಧ ತಾನೆ ಏನು?

ಕಾಳೀ-ಏನು? ಹೆಂಡತಿಯ ಅಪರಾಧವೇನು?

ಪ್ರಭಾತ-ನೀನು ವಿವೇಕಿ, ಮೂಢನಲ್ಲ. ನಿನ್ನ ವಿದ್ಯೆಗ ಈಗ ತಕ್ಕ ಫಲವುಂಟಾಯಿತು. ಭಾರತಾಂಗನೆಯರಲ್ಲಿ ಲಜ್ಜೆಯೇ ಮುಖ್ಯ ಭೂಷಣವಾಗಿ ಕಂಗೊಳಿಸುವುದು. ಲಜ್ಜೆಯೇ

ಸಂಪತ್ತು, ಲಜ್ಜೆಯೇ ಪತಿಭಕ್ತಿ. ಇದನ್ನು ನೀನು ಕಾಣೆಯಾ?

ಈ ಮಾತನ್ನು ಕೇಳಿ ಕಾಳೀಕಿಶೋರನ ಶಾಂತವಾದ, ಗಂಭೀರವಾದ ಮುಖಮುದ್ರೆಯು ಭಯಂಕರವಾಗಿ ಪರಿಣಮಿಸಿತು. ಆಗ ಕರ್ಕಶಧ್ವನಿಯಿಂದ ಪ್ರಭಾತನನ್ನು ಕುರಿತು— ನನಗೆ ಎಲ್ಲವೂ ತಿಳಿದಿದೆ. ಆ ಲಜ್ಜೆಗೆ ಸಮಯಾಸಮಯವು ನಿನಗೆ ಮಾತ್ರ ತಿಳಿದಿಲ್ಲ, ಎಂದನು.

ಪ್ರಭಾತ—ಹಾಗಾದರೆ ಸಾಧ್ವಿಯಾದ ಹೆಂಡತಿಯನ್ನು ಬಿಟ್ಟು ಬಿಡುವುದುಂಟೆ?

ಕಾಳೀ—ಹೇಳಿದುದನ್ನೇ ಹೇಳಬೇಕೋ? ತಂದೆಯು ಸಾಯುವ ಹೊತ್ತಿನಲ್ಲಿ ಯಾವಳನ್ನು ನೋಡಬೇಕೆಂದು ಹಂಬಲಿಸುತ್ತ ಆ ಹಂಬಲಿಕೆಯಿಂದಲೇ ಪ್ರಾಣಬಿಟ್ಟನೋ, ಅವಳೇ ಹೆಂಡತಿ? ಅವಳಿಗೆ ಲಜ್ಜೆಯು ಭೂಷಣ? ಅವಳನ್ನೇ ತ್ಯಾಗ ಮಾಡಬಾರದೆಂದು ನೀನು ಹೇಳುವುದು? ಅವಳೊಡನೆಯೇ ಸಂಸಾರ? ಅವಳೊಡನೆಯೊಂದೇ ಅಲ್ಲ, ಆ ಸಂಸಾರದಲ್ಲಿಯೇ ನನಗೆ ದ್ವೇಷ ಹುಟ್ಟಿ ಹೋಗಿದೆ.

ಹೀಗೆ ಹೇಳುತ ಹೇಳುತ ಅವನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯಿತು. ಅದನ್ನು ನೋಡಿ ಪ್ರಭಾತನು, ಏನೋ ಪ್ರಬಲವಾದ ಅಚಾತುರ್ಯವು ನಡದೇ ಇರಬೇಕು. ಇಲ್ಲದಿದ್ದರೆ ಇಷ್ಟು ಮಟ್ಟಿಗೆ ಬುದ್ಧಿವಿಕಲ್ಪವುಂಟಾಗುವುದಕ್ಕೆ ಅವಕಾಶವಿರುತ್ತಿರಲಿಲ್ಲ. ಈಗಿನ ಸ್ಥಿತಿಯನ್ನು ನೋಡಿದರೆ ಏನೋ ಅನರ್ಥವು ಸಂಭವಿಸುವಂತೆಯೇ ಇದೆ, ಎಂದುಕೊಂಡು ಕಿಶೋರನನ್ನು ಕುರಿತು—ನೀನು ಇಷ್ಟು ಹಠಮಾಡು

ವುದು ಸರಿಯಲ್ಲ. ನಾನು ಹೇಳುವ ಒಂದು ಮಾತನ್ನಾದರೂ ಕೇಳು. ಸಂಸಾರದಲ್ಲೇ ಹುಟ್ಟಿರುವ ದ್ವೇಷವನ್ನು ಬಿಡು. ಇನ್ನೊಬ್ಬಳನ್ನಾದರೂ ಮದುವೆ ಮಾಡಿಕೊಂಡು ಸಂಸಾರದಲ್ಲಿ ಸುಖಪಡು. ಈ ವಯಸ್ಸಿನಲ್ಲಿ ಕಾಯಕ್ಲೇಶವು ನಿನಗೆ ತಕ್ಕುದಲ್ಲ, ಎಂದು ಹೇಳಿದನು.

ಕಾಳೀ—ಪ್ರಭಾತ! ನೀನೇನೋ ನನ್ನ ವಿಷಯದಲ್ಲಿ ಒಳ್ಳೇಯದನ್ನು ಹೇಳುವೆ. ಆದರೂ ಈ ಸಂಸಾರದಲ್ಲಿ ಸುಖಪಡುವುದು ನನ್ನ ಹಣೆಯಲ್ಲಿ ಬರೆದಿಲ್ಲ. ಹಾಗೆ ಸುಖಪಡುವುದು ಬರೆದಿದ್ದಿದ್ದರೆ, ಬೇರೆ ಮದುವೆ ಮಾಡಿಕೊಂಡು ಸುಖಪಡು ಬೇಕೆ? ಇಲ್ಲ, ನನ್ನಹಣೆಯಲ್ಲಿ ಆ ಸುಖ ಬರೆದಿಲ್ಲ.

ಪ್ರಭಾತನು ಮಿತ್ರನೊಡನೆ ವಿಶೇಷವಾಗಿ ಮಾತನಾಡುವುದರಿಂದ ಪ್ರಯೋಜನವಿಲ್ಲವೆಂದು ತಿಳಿದು, ಅವನ ಕೈಯನ್ನು ಹಿಡಿದು-ಕಿಶೋರ! ದಯೆಯಿಟ್ಟು ನನ್ನ ಮಾತನ್ನು ಕೇಳು. ಯಾವುದೋ ಒಂದು ಕ್ರೋಧದಿಂದ ಈ ರೀತಿ ಪ್ರಯತ್ನಿಸುತ್ತೀಯೆ. ಈ ಕ್ರೋಧವು ಶಾಂತವಾದ ಮೇಲೆ ಆ ಕೆಲಸವು ತಪ್ಪಾದೀತು. ಆಗ ಅದನ್ನು ಸರಿಮಾಡಿಕೊಳ್ಳುವುದಕ್ಕೆ ಆಗುವುದಿಲ್ಲ. ಬೇಡ, ಬೇಡ, ಈ ರೀತಿ ಪ್ರಯತ್ನವನ್ನು ಬಿಡು, ಎಂದು ಹಲವು ಬಗೆಯಾಗಿ ಹೇಳಿ ನೋಡಿದನು. ಆದರೆ ಪ್ರಭಾತನ ಮಾತುಗಳು ಕಿಶೋರನಲ್ಲಿ ನಿಷ್ಫಲವಾಗಿ ಹೋಯಿತು. ಹಾಗೆಯೇ ಕೊನೆಗೆ ಪ್ರಭಾತನು ಮನೆಗೆ ಹೊರಟುಹೋದನು.

——

# ಆರನೆಯ ಪರಿಚ್ಛೇದ.

ದಿವಸಗಳ ಮೇಲೆ ದಿವಸಗಳು ಕಳೆದು ಹೋದವು. ತಿಂಗಳುಗಳೂ ಕಳೆದುಹೋದವು. ವರುಷವು ಮಾತ್ರ ಕಳೆಯುಲಿಲ್ಲ. ರಾಮರತ್ನನು ಅಳಿಯನ ಪರ್ಯವಸಾನವನ್ನು ಮನಸ್ಸಿಗೆ ತಂದುಕೊಳ್ಳಲೇ ಇಲ್ಲ. ಎಂಬನಂತೆಯೇ ಉದಾಸೀನನಾಗಿಯೇ ಇದ್ದು ಬಿಟ್ಟನು. ಕಾಲವು ಯಾರಿಗೋಸ್ಕರ ತಾನೇ ನಿಲ್ಲಬಲ್ಲದು? ಕಾಲದ ಜತೆಯಲ್ಲಿಯೇ ಆಯುಷ್ಯವೂ ಕಳೆದು ಹೋಗುತ್ತಿರುವುದು. ಹೀಗೆಯೇ ಇರುತ್ತಿರುವಾಗ ರಾಮರತ್ನನಿಗೆ ಬಂದಾನೊಂದುದಿನ ದೈವಯೋಗದಿಂದ ಪಾರ್ಶ್ವವಾಯುವು ಬಂದು ಆಕ್ರಮಣ ಮಾಡಿತು. ರೋಗವಾದರೋ ಬಲವತ್ತರವಾದುದು. ರಾಮರತ್ನನು ರೋಗದ ವೇಗವನ್ನು ತಡೆಯಲಾರದೆ ಬಹು ಸಂಕಟಪಡುತ್ತಾ ಹಾಸಿಗೆಯಲ್ಲಿ ಮಲಗಿದಾನೆ. ಪಾರ್ಶ್ವದಲ್ಲಿ ಮಗಳು ಕುಳಿತು ಉಪಚರಿಸುತಲಿದಾಳೆ. ಹಾಗೆಯೇ ರಾಮರತ್ನನು ಮಗಳನ್ನು ದೃಷ್ಟಿಸಿ ನೋಡಿದನು. ನೋಡುತ ನೋಡುತ ಅನಿರ್ವಚನೀಯವಾದ ವ್ಯಸನ ಉಂಟಾಯಿತು. ಎದೆ ಒಡೆದುಕೊಳ್ಳುವುದಕ್ಕೆ ಆರಂಭಿಸಿತು. ಆ ವೇಗವನ್ನು ತಡೆಯಲಾರದೆ ಹೊರಳಿದನು. ಅದನ್ನುನೋಡಿ ಮಗಳು ಬಹುಕಾತರಳಾದಳು. ಹಾಗೆಯೇ ತಂದೆಯನ್ನು ನೋಡುತ ನೋಡುತ ಸ್ವಭಾವತಃಕೋಮಲೆಯಾದ ಇವಳು ಮನದ ಉದ್ವೇಗವನ್ನು ತಡೆಯಲಾರದೆ ಅತ್ತಳು. ಇವಳು ಅಳುವುದನ್ನು ನೋಡಿ ರಾಮರತ್ನನಿಗೆ ಅಳುವು ಬಂದಿತು. ಅದನ್ನು ನೋಡಿ ಅವಳು ಮತ್ತೂ

ಅತ್ತಳು. ಆಗ ರಾವ ರತ್ನನು ಪ್ರಾಣವೇ ಹೋದವನ ಹಾಗಾದನು. ಒಡನೆಯೇ ಅಳಿಯನನ್ನು ನೋಡಬೇಕೆಂಬ ಚಾಪಲ್ಯ. ಅದಕ್ಕಾಗಿ ಅಳಿಯನನ್ನು ಕರೆದುಕೊಂಡು ಬರುವಂತೆ ದಾಸ ದಾಸಿಯರನ್ನೆಲ್ಲಾ ಕಳುಹಿಸಿದನು. ವಿಯೋಗಿನಿಯೂ ತನ್ನ ಸ್ವಾಮಿಗೆ ಒಂದು ಪತ್ರಿಕೆಯನ್ನು ಕೈಯ್ಯಾರೆ ಬರೆದು ಬಬ್ಬ ಆಪ್ತಳಾದ ದಾಸಿಯ ಕೈಯಲ್ಲಿ ಕೊಟ್ಟು ಕಳುಹಿಸಿದಳು. ಸರಿಯಾದ ಕಾಲಕ್ಕೆ ಅವರೆಲ್ಲರೂ ಕಾಳೀಕಿಶೋರನ ಬಳಿಗೆ ಹೋಗಿ ವಿಷಯವನ್ನು ತಿಳಿಸಿದರು. ಅವರೆಲ್ಲರನ್ನೂ ಅವನು ಗದರಿಸಿ ಕಳುಹಿಸಿಬಿಟ್ಟನು. ಆ ಮೇಲೆ ವಿಯೋಗಿನಿಯ ಕಾಗದವನ್ನು ಒಪ್ಪಿಸಿದರು. ಆ ಕಾಗದದ ಕಡೆಗೂ ಅವನು ದೃಷ್ಟಿಯನ್ನು ಕೊಡಲಿಲ್ಲ. ಎಲ್ಲರೂ ಮುಖವನ್ನು ಇಳಿಬಿಟ್ಟುಕೊಂಡು ಹಿಂದಿರುಗಿ ಹೋಗಿ ರಾಮರತ್ನನಿಗೆ ಸಂಗತಿಯನ್ನು ತಿಳಿಸಿದರು. ವಿಯೋಗಿನಿಯಂತೂ ಇದನ್ನು ಕೇಳಿ ಅನ್ನ ನೀರನ್ನು ಬಿಟ್ಟು ಕೊರಗಲಾರಂಭಿಸಿದಳು. ಅತ್ತು ಅತ್ತು ಸಾಕಾಯಿತು. ಎಷ್ಟು ಅತ್ತರೆ ತಾನೇ ಏನು? ಕಾಳೀಕಿಶೋರನು ಬೇರೆ ಬರುವಂತಿಲ್ಲ. ಕಾಳೀಕಿಶೋರನು ಯಥಾರ್ಥಪುರುಷನಾಗಿದ್ದನು. ಮಾವನ ಮನೆಯೆಂದರೆ ಅವರು ಮಾಡಿದ್ದನ್ನೆಲ್ಲಾ ಮಹಾ ಪ್ರಸಾದವೆಂದು ತಲೆಯಲ್ಲಿ ಧರಿಸಿಕೊಳ್ಳತಕ್ಕವನಲ್ಲ. ತಂದೆ ತಾಯಿಗಳನ್ನಾದರೂ ಬಿಟ್ಟು ಮಾವನ ಮನೆಯವರ ಒಲುಮೆಯನ್ನು ಸಂಪಾದಿಸಿಕೊಳ್ಳಬೇಕೆಂಬ ಗಂಡಸರ ಗುಂಪಿನಿಂದ ಬಹಿಷ್ಕೃತನಾಗಿದ್ದನು. ಆ ಕಾರಣದಿಂದಲೇ ತನ್ನ ತಂದೆಯ ಅವಸಾನ ಕಾಲವನ್ನು ನೆನೆಸಿಕೊಂಡು, ರೇಗಿ ರೇಗಿ ತನ್ನನ್ನು ಕರೆಯಬೇಕೆಂದು

ಬಂದ ಮಾವನ ಮನೆಯವರನ್ನು ಧಿಕ್ಕರಿಸಿದನು. ಕಾಳೀ ಕಿಶೋರ ! ನೀನೇ ದಿಟ್ಟನಾದ ಗಂಡು.

ರಾಮರತ್ನನಿಗೆ ರೋಗವು ಬಳೆಯಿತು. ಇವನ ಯೋಗ ಕ್ಷೇಮವನ್ನು ವಿಚಾರಿಸಿಕೊಳ್ಳುವುದಕ್ಕೆ ಯಾರೂ ಬರಲಿಲ್ಲ. ಇವನು ಚೆನ್ನಾಗಿದ್ದ ಕಾಲದಲ್ಲಿ ಜನರ ವಿಷಯದಲ್ಲಿ ಎಷ್ಟು ಮಟ್ಟಿಗೆ ನಿರ್ಘೃಣನಾಗಿ ನಡೆದುಕೊಳ್ಳುತ್ತಿದ್ದನೋ ಅದೆಲ್ಲವೂ ಈಗ ಫಲಿಸುತ್ತ ಬಂದಿತು. ಯಾರನ್ನಾದರೂ ಕರೇಕಳುಹಿಸಿ ದರೆ, ಅವರು ಇಲ್ಲದ ನೆಪವೊಂದನ್ನು ಹೇಳಿ ಉಪಾಯವಾಗಿ ತಪ್ಪಿಸಿಕೊಂಡು ಬಿಡುತ್ತಿದ್ದರು. ಹಾ ದೈವವೇ ! ನಿನ್ನ ಗತಿಯು ವಿಚಿತ್ರವಾದುದು. ನೀನು ಯಾರು ಯಾರಲ್ಲಿ ಹೇಗೆ ಹೇಗೆ ಇರಬೇಕೋ ಹಾಗೆ ಹಾಗೆ ಇರುವೆ. ನಿನಗೆ ನಮ್ಮವರೂ ಬೇರೆ ಯವರೂ ಎಂಬ ಭೇದವೇ ಇಲ್ಲ. ನೀನೇ ನಿಷ್ಪಕ್ಷಪಾತೀ ನಿನ್ನ ಶಾಸನವೂ ನಿಷ್ಪಕ್ಷಪಾತವಾದುದು. ಆದುದರಿಂದಲೆ, ರಾಮರತ್ನನನ್ನು ಹಾಗೆ ಗೋಳಾಡಿಸುತ್ತಿರುವೆ. ಇಗೋ ನೋಡು, ರಾಮರತ್ನನು ಒಂದೆರಡು ದಿನ ಬಲವತ್ತರವಾದ ರೋಗದ ಯಾತನೆಯಿಂದ ನರಳಿ ನರಳಿ ಅನ್ಯಾಯವಾಗಿ ಕೊನೆಗೆ ದೇಹತ್ಯಾಗವನ್ನು ಮಾಡಿಬಿಟ್ಟನು. ಆಗಬೇಕಾದ ಸಂಸ್ಕಾರ ವೆಲ್ಲಾ ಆಗಿಹೋಯಿತು. ಪತಿಪರಾಯಣೆಯಾದ ಅನಂಗ ಮೋಹಿನಿಯು ಸಹಗಮನ ಮಾಡಿಬಿಟ್ಟಳು. ಇನ್ನು ವಿಯೋ ಗಿನಿಗೆ ದಿಕ್ಕಾರು ? ವಿಯೋಗಿನಿ ! ನೀನು ಬದಿಕಿರುವವರೆಗೂ ನಿನ್ನ ತಾಯಿತಂದೆಗಳು ಶಾಶ್ವತವಾಗಿರುವರೆಂದು ಯೋಚಿಸಿ ದ್ದೆಯಾ ? ಅಯ್ಯೋ ಪಾಪ! ಸುಖದುಃಖಗಳಲ್ಲಿ ಸಮಭಾಗವನ್ನು

ಕೊಡುತ್ತಿದ್ದ ಅಂತಹ ಸ್ವಾಮಿಯನ್ನು ಕಾರಣಾಂತರದಿಂದ ಒಂದು ಬಗೆಯಾಗಿ ನಿರಾಕರಿಸಿಬಿಟ್ಟುದರ ಫಲವು ನಿನಗೆ ಈಗ ಕಾಣುತ್ತದೆ.

ಯಾವಾಗ ವಿಯೋಗಿನಿಗೆ ಇಲ್ಲಿ ಆಶ್ರಯವು ತಪ್ಪಿತೋ ಆಗ ಗಂಡನ ಮನೆಗೆ ಹೋಗಬೇಕೆಂದು ನಿಶ್ಚಯಿಸಿದಳು. ಒಡನೆಯೇ ಒಬ್ಬ ದಾಸಿಯನ್ನು ಕರೆದು ಒಂದು ಪಾಲಕಿಯನ್ನು ಸಿದ್ಧಪಡಿಸುವಂತೆ ಹೇಳಿದಳು.

ದಾಸಿ-ಯಾಕೆ ?

ವಿಯೋಗಿನಿ.—ನಾನು ನನ್ನ ಅತ್ತೆಯ ಮನೆಗೆ ಹೋಗಬೇಕು.

ದಾಸಿ-ಈಗೇನು ಬಂತು ? ಗಂಡನು ಬಂದು ಕರದಾಗ ಮಾತ್ರ ಈ ಬುದ್ಧಿ ಎಲ್ಲಿ ಹೋಗಿತ್ತು ?

ವಿಯೋಗಿನಿ-ತಂದೆ ತಾಯ್ಗಳ ಮಾತಿಗೆ ವಿರೋಧವಾಗಿ ನಾನು ನಡೆದು ಕೊಳ್ಳಲಾರದೆ, ಆಗ ನಾನು ಹೋಗಲಿಲ್ಲ. ಈಗ ಅವರು ಇಲ್ಲ. ನಾಚಿಕೆ ಪಟ್ಟುಕೊಂಡರೆ ಪ್ರಯೋಜನವೂ ಇಲ್ಲ. ಈಗ ನನ್ನನ್ನು ಕರೆಯುವುದಕ್ಕೆ ಯಾರುತಾನೆ ಬಂದಾರು ? ಈಗ ನಾನೇ ಹೋಗಬೇಕು. ಇಲ್ಲದಿದ್ದರೆ ನನ್ನ ಗತಿಯೇನು ? ತಡಮಾಡದೆ ಪಾಲಕಿಯನ್ನು ಸಿದ್ಧಪಡಿಸು.

ದಾಸಿಯು ಇನ್ನೇನೂ ಹೇಳಲಾರದೇ ಪಾಲಕಿಯನ್ನು ಸಿದ್ಧಪಡಿಸಿದಳು. ವಿಯೋಗಿನಿಯು ದಾಸಿಯನ್ನು ಕರೆದು ಕೊಂಡು ಪಾಲಕಿಯನ್ನು ಏರಿ ಹೊರಟಳು. ಅದು ಬೇಗ ಬೇಗನೆ ಹೋಗುತ್ತಾ ಕಿಶೋರನ ಮನೆಯ ಬಳಿ ಸ್ವಲ್ಪ ದೂರ

ದಲ್ಲಿ ಬಂದು ನಿಂತಿತು. ವಿಯೋಗಿನಿಯು ಪಾಲಕಿಯಿಂದಿಳಿದು ಪಾದಚಾರಿಣಿಯಾಗಿ ಹೊರಟಳು. ಗಂಡನ ಮನೆಯೂ ಸಮೀಪಿಸಿತು. ವಿಯೋಗಿನಿಯ ಶರೀರವೆಲ್ಲವೂ ನಡುಗಿತು. ಆದರೂ ಮೆಲ್ಲಮೆಲ್ಲನೆ ನಡೆದಳು. ಮನೆಯು ಹತ್ತಿರವಾದ ಹಾಗೆಲ್ಲ ಮೈ ಬೆವರುವುದು ಹೆಚ್ಚಾಯಿತು. ಮನೆಯ ಮುಂದೆ ನಿಂತಳು. ಒಳಗೆ ಹೋಗಲು ಕಾಲೇ ಬರಲಿಲ್ಲ. ಸಾವಿರಾರು ಸೆಗ್ಗಲು ಮುಳ್ಳುಗಳು ಒಟ್ಟಿಗೆ ಚುಚ್ಚಿಕೊಂಡರೆ ಎಷ್ಟು ನೋವಾಗುವದೋ ಅಷ್ಟು ನೋವಾಯಿತು. ಅಯ್ಯೋ! ಈ ಹಾಳು ಪ್ರಾಣವು ಈ ಕಾಲದಲ್ಲಿಯೇ ಹೋದರೆ ಎಷ್ಟೋ ಚೆನ್ನಾಗಿದ್ದುತ್ತಿದೆ, ಎಂದು ಅಡಿಗಡಿಗೂ, ಯೋಚಿಸಿಕೊಳ್ಳುತ್ತಿದ್ದಳು. ಹಾಗೂ ಹೀಗೂ ಒಳಹೊಕ್ಕಳು. ಮನೆಯಲ್ಲಿ ಆದಾರೂ ಇರಲಿಲ್ಲ. ಕಿಟಕಿ ಬಾಗಿಲು ಇವುಗಳು ತೆರದೇ ಇವೆ. ಒಂದಾನೊಂದು ಕಾಲದಲ್ಲಿ ಆನಂದರಸಕ್ಕೆ ಆಕರವಾಗಿದ್ದ ಮನೆಯು ಈಗ ವಿಯೋಗಿನಿಗೆ ಭೂತಪ್ರೇತಗಳಿಂದ ತುಂಬಿದ ಸ್ಮಶಾನದಂತೆ ಕಂಡುಬಂದಿತು. ಇದನ್ನು ನೋಡಿದಳು. ನೋಡಲೇ ಆವಳ ಹೃದಯವು ಒಡೆದು ಹೋಗಿ ಕಿರಿಚಿಕೊಳ್ಳುತ್ತಾ ಭೂಮಿಯ ಮೇಲೆ ಬಿದ್ದು ಬಿಟ್ಟಳು. ಇವಳ ಧ್ವನಿಯಿಂದ ಮನೆಯಲ್ಲೆಲ್ಲಾ ಪ್ರತಿ ಧ್ವನಿಯುಂಟಾಗಿ ಮತ್ತಷ್ಟು ಭಯವುಂಟಾಯಿತೇ ಹೊರತು, ಇವಳ ಕೂಗಿನಿಂದ ಮತ್ತೇನೂ ಪ್ರಯೋಜನವಾಗಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ವಿಯೋಗಿನಿಯು ಎದ್ದು ಮನೆಯೆಲ್ಲವನ್ನೂ ಹುಡುಕಿದಳು. ಎಲ್ಲಿ ನೋಡಿದರೂ ಏನೇನೂ ಇರಲಿಲ್ಲ. ವಿಯೋಗಿನಿಗೆ ಕೈಕಾಲುಗಳಲ್ಲಿ ಬಲವೇ ತಗ್ಗಿ

ತಲೆಯಮೇಲೆ ಕೈಯಿಟ್ಟುಕೊಂಡು ಕುಳಿತುಬಿಟ್ಟಳು. ಮಾತು ಹೊರಡದು. ಮಗ್ಗುಲಲ್ಲಿ ದಾಸಿಯು ಮಾತ್ರ ನಿಂತಿದ್ದಾಳೆ. ಯಾರೊಡನೆ ಯಾರೂ ಮಾತಾಡಲು ಸಮರ್ಥರಾಗಲಿಲ್ಲ. ಆಗ ಅರ್ಧರಾತ್ರಿ. ಇವರಿಬ್ಬರೇ ಬಹು ಕಷ್ಟದಿಂದ ಆ ಕಾಳರಾತ್ರಿಯನ್ನು ಕಳೆದರು.

---

## ಏಳನೆಯ ಪರಿಚ್ಛೇದ.

ಬೆಳಗಾಯಿತು. ಗಗನಮಂಡಲದಲ್ಲಿ ಪಕ್ಷಿಗಳು ಅರುಣದೇವನನ್ನು ಸ್ತೋತ್ರಮಾಡುತ್ತಿವೆಯೋ ಎಂಬಂತೆ ಧ್ವನಿಮಾಡಲಾರಂಭಿಸಿದವು. ಸೂರ್ಯದೇವನ ಕಿರಣಗಳಿಂದ ಹೆದರಿ ಕತ್ತಲೆಯು ದಿಕ್ಕೆಟ್ಟು ಓಡಿತು. ವಿಯೋಗಿನಿಯು ಎದ್ದಳು. ಎದ್ದು ಯಥಾಪ್ರಕಾರ ಮನೆಯೆಲ್ಲವನ್ನೂ ಹುಡುಕಿದಳು. ಎಲ್ಲೆಲ್ಲಿಯೂ ಕಸ. ಮೂಲೆಗಳಲ್ಲಿ ಜೊಡನ ಹೊರೆ. ಇವು ಬೇಕಾದಹಾಗೆ ಕಾಣುತ್ತಿದ್ದುವೇ ಹೊರತು ಇವಳು ಯಾವುದನ್ನು ಹುಡುಕುತಿದ್ದಳೋ ಅದುಮಾತ್ರ ಕಣ್ಣಿಗೆ ಬೀಳಲೇಇಲ್ಲ. ಇನ್ನು ಮುಂದೆ ಏನುಮಾಡಬೇಕೆಂಬುದೂ ತಿಳಿಯಲಿಲ್ಲ. ಯಾರನ್ನು ಕೇಳಿದರೆ ನಿಜಾಂಶ ತಿಳಿದೀತು, ಎಂದು ಯೋಚಿಸಿದಳು. ತನ್ನ ಗಂಡನಿಗೆ ಪರಮಾಪ್ತನಾದ ಪ್ರಭಾತನನ್ನು ಕರೆಯಿಸಿ ಕೇಳುವುದು ಒಳ್ಳೆಯದೆಂದು ತೋರಿತು. ಹೇಳಿಯೂ ಕಳುಹಿಸಿದಳು.

ಪ್ರಭಾತನು ಬಂದನು. ವಿಯೋಗಿನಿಯು ಅತ್ಯಾತುರ

ದಿಂದ ಗಂಡನ ಸಮಾಚಾರವೇನೆಂದು ಕೇಳಿದಳು. ಕೂಡಲೆ ಪ್ರಭಾತನು ಬಹು ಕಷ್ಟದಿಂದ ಸಂಗತಿಗಳನ್ನೆಲ್ಲಾ ತಿಳಿಯ ಪಡಿಸಿದನು. ಪ್ರಭಾತನ ಮಾತು ಇನ್ನೂ ಮುಗಿಯಲೇ ಇಲ್ಲ. ಅಷ್ಟರೊಳಗಾಗಿಯೇ ವಿಯೋಗಿನಿಯು ಮೂರ್ಛಿತಳಾಗಿ ಕೆಳಗೆ ಬಿದ್ದುಬಿಟ್ಟಳು. ಪ್ರಭಾತನೂ ದಾಸಿಯೂ ಗಾಬರಿಯಾಗಿ ಶೈತ್ಯೋಪಚಾರವನ್ನು ಮಾಡಿದರು. ಅವಳು ಎಚ್ಚತ್ತು ಕುಳಿತುಕೊಂಡಳು, ಅಯ್ಯೋ, ದೈವವೇ! ದುಃಖವೆಂಬುದನ್ನು ನನಗೋಸ್ಕರವೇ ನಿರ್ಮಿಸಿದೆಯಾ? ಇರಲಿ. ಎಷ್ಟು ವ್ಯಸನ ಪಟ್ಟರೇನಾನೆ ಸರಿಹೋದೀತು? ಇನ್ನು ಸ್ಥಿರಳಾದೆನು. ನನ್ನ ತಪ್ಪಿನಿಂದಲೇ ನನ್ನ ಸ್ವಾಮಿಯು ಸನ್ಯಾಸಿಯಾದನು, ಎಂದು ಎದ್ದುನಿಂತುಕೊಂಡಳು. ಅವಳಿಗೆ ಇನ್ನಾವುದೂ ಬೇಕಾಗಿರಲಿಲ್ಲ. ಆಗ ಪ್ರಭಾತನನ್ನು ಕುರಿತು-ಬಳ್ಳೀಯದು, ಇನ್ನುಮುಂದಕ್ಕೆ ನಾನು ಮಾಡಬೇಕಾದುದು ಏನು? ಎಂದಳು.

ಪ್ರಭಾತ—ನಾನು ತಾನೇ ಏನು ಹೇಳಲಿ?

ವಿಯೋಗಿನಿ-ಇದುವರೆಗೂ ನಾನು ವಿಚಾರಶೂನ್ಯಳಾಗಿದ್ದೆನು. ಸಂಸಾರ ಸುಖದಲ್ಲಿ ಅಪೇಕ್ಷೆಯೂ ಇದ್ದಿತು. ಈಗ ಅವೆರಡೂ ಹೋದವು. ಇನ್ನು ನನ್ನ ಹಣೆಯಲ್ಲಿ ಬರೆದಿದ್ದು ಆಗಲಿ.

ಪ್ರಭಾತ—ಅದೇನು?

ವಿಯೋಗಿನಿ—ನನ್ನ ಹಣೆಯಲ್ಲಿ ಸಂಸಾರ ಸುಖವು ಬರೆದಿಲ್ಲವೆಂಬುದು ಚೆನ್ನಾಗಿ ಗೊತ್ತಾಯಿತು. ಇನ್ನು ನಾನು ಸನ್ಯಾಸಿನಿಯಾಗಲು ಅಡ್ಡಿ ಏನು ಇದೆ?

ಪ್ರಭಾತ-ಅದೇಕೆ ಸನ್ಯಾಸಿನಿಯಾಗಬೇಕು? ಅದು ಆಗಲಾರದು. ನಿನ್ನ ತಂದೆಯು ಅಪರಿಮಿತವಾದ ಐಶ್ವರ್ಯ ವನ್ನು ಸಂಪಾದಿಸಿರುವನು. ಆ ಐಶ್ವರ್ಯಕ್ಕೆ ನೀನಲ್ಲದೆ ಉತ್ತರಾಧಿಕಾರಿಣಿ ಮತ್ತಾರು? ನಿನ್ನ ತಂದೆಗೆ ನೀನೊಬ್ಬಳೇ ಮಗಳಲ್ಲವೇ?

ವಿಯೋಗಿನಿ-ನನ್ನ ತಂದೆಯು ಲಕ್ಷಾಧಿಕಾರಿಯಾಗಿದ್ದ ರೇನು? ಭಿಕ್ಷಾಧಿಕಾರಿಯಾಗಿದ್ದರೇನು? ಆ ಐಶ್ವರ್ಯದಿಂದ ನನ ಗಾಗಬೇಕಾದುದೇನು?

ಪ್ರಭಾತನು ವಿಯೋಗಿನಿಯ ಮಾತನ್ನು ಕೇಳಿ ತಲೆ ಯನ್ನು ತಗ್ಗಿಸಿ ತನ್ನ ಮನಸ್ಸಿನಲ್ಲಿ-ವಿಯೋಗಿನಿಯ ಮನಸ್ಸು ಬಹಳವಾಗಿ ಬದಲಾಯಿಸಿದೆ. ಅವಳ ಮಾತನ್ನು ಕೇಳಿದರೆ ಏಕೋ ಭಯವಾಗುವುದು. ಯಾವ ಯುಕ್ತಿವಾದವನ್ನೂ ಮನ ಸ್ಸಿಗ ತಂದುಕೊಳ್ಳುವ ಹಾಗೆ ಕಾಣುವುದಿಲ್ಲ, ಎಂದುಕೊಂಡು, ಅವಳನ್ನು ಕುರಿತು- ನೀನು ಸನ್ಯಾಸವನ್ನು ತೆಗೆದುಕೊಂಡರೆ ತಾನೇ ನಿನಗಾಗುವುದೇನು? ಕಾಳೀಕಿಶೋರನು ವಿದ್ಯಾವಂತ ಮತ್ತು ಬುದ್ಧಿವಂತ. ನಿನಗೆ ಈರೀತಿ ಬುದ್ಧಿ ಬಂದಿರುವುದು ಅವನಿಗೆ ಗೊತ್ತಾದರೆ ಮತ್ತೆ ಸಂಸಾರದಲ್ಲಿ ಗಮನವಿಟ್ಟರೂ ಇಡಬಹುದು. ನೀನು ಸನ್ಯಾಸಿನಿಯಾಗಿ ಹೋದರೆ, ಮತ್ತೆ ನೀವಿಬ್ಬರೂ ಸೇರುವ ಬಗೆ ಹೇಗೆ? ಅವನ ಹಾಗೆ ನೀನೂ ದುಡುಕಬೇಡ. ಏನಾದರೂ ಮಾಡಿ ಮತ್ತೆ ಅವನನ್ನು ಹೊಂದುವುದಕ್ಕೆ ಪ್ರಯತ್ನಿಸು, ಎಂದನು.

ವಿಯೋಗಿನಿ-ಅವರು ಹಠವಾದಿಗಳೆಂಬುದನ್ನು ನಾನು ಬಲ್ಲೆ. ಅವರು ಹಿಡಿದ ಹಠವನ್ನು ಎಂದಿಗೂ ಬಿಡತಕ್ಕವರಲ್ಲ. ಅವರು ಸನ್ಯಾಸದಿಂದ ಹಿಂದಿರುಗತಕ್ಕವರಲ್ಲವೆಂಬ ನಂಬಿಕೆಯುಂಟು. ಆದುದರಿಂದ ನನಗೆ ಸನ್ಯಾಸವೇ ಶ್ರೇಯಸ್ಸೆಂದು ತೋರುತ್ತದೆ. ನಾನು ಸನ್ಯಾಸಿನಿಯೇ ಆಗುವೆನು.

ಪ್ರಭಾತನು ವಿರಕ್ತನಾಗಿ--ಸನ್ಯಾಸಿನಿಯಾಗುವದಕ್ಕೆ ಏನು ಮಾಡಬೇಕು ? ಸನ್ಯಾಸಿನಿಯಾಗುವದೇನೋ ಸುಲಭ. ಅನಂತರ ಪಶ್ಚಾತ್ತಾಪ ಪಟ್ಟರೆ ಸರಿಹೋಗುವದುತಾನೆ ಕಷ್ಟ ಇನ್ನೂ ಕೆಲವು ಕಾಲ ಪತಿಯನ್ನೇ ನಿರೀಕ್ಷಿಸು. ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು. ಆಮೇಲೆ ಹಣೆಯಲ್ಲಿ ಬರೆದು ಇದ್ದಂತೆ ಆಗಲಿ, ಎಂದನು.

ವಿಯೋಗಿನಿ —ಬೆಳೆಯ ಲಕ್ಷಣವು ಮೊಳೆಯಲ್ಲಿಯೇ ತೋರುವುದು. ಹಾಗೆ ಮುಂದಕ್ಕೆ ಬೆಳೆಯಾಗುವಂತೆ ಇದ್ದರೆ ಈಗಲೇ ಒಂದು ಕ್ರಮದಲ್ಲಿಯೇ ಇರುತಿತ್ತು. ಅದೆಲ್ಲಾ ಹೋಗಲಿ. ಮನೆ ಮಠ ಮುಂತಾದುವಾವುದೂ ನನಗೆ ಬೇಕಾಗಿಲ್ಲ. ಸನ್ಯಾಸವು ಮಾತ್ರ ಬೇಕಾಗಿದೆ.

ಪ್ರಭಾತ-ಈ ವಯಸ್ಸಿನಲ್ಲಿಯೇ ನಿನಗೆ ಸನ್ಯಾಸವೆಂದರೇನು? ಯುವತಿಯಾದ ನಿನಗೆ ಸನ್ಯಾಸಧರ್ಮವು ಎಷ್ಟು ಮಟ್ಟಿಗೆ ಫಲಿಸೀತು ? ನಿನ್ನ ತಂದೆಯ ಆಸ್ತಿಯನ್ನೆಲ್ಲಾ ಸರಿಯಾಗಿ ರಕ್ಷಿಸಿಕೊಂಡು ದಾನಧರ್ಮ ಪರೋಪಕಾರವನ್ನು ಮಾಡಿ ದೇವಧ್ಯಾನವನ್ನು ಮಾಡುತ್ತಿದ್ದರೆ ದೇವರು ನಿನ್ನನ್ನು ಮೆಚ್ಚುವನು. ಅದನ್ನು ಬಿಟ್ಟು ಸನ್ಯಾಸವೆ ?

ವಿಯೋಗಿನಿ-ಸ್ತ್ರೀಯರಿಗೆ ಪತಿಯೇ ಪರದೈವ, ತಾಯಿ ತಂದೆಗಳು, ಎಂದಿಗೂ ಪತಿಗೆ ಸಮಾನರಾಗುವದಿಲ್ಲ. ಇಹದಲ್ಲಿಯೂ ಪರದಲ್ಲಿಯೂ ಸತಿಗೆ ಪತಿಯೇ ಗತಿ. ಪತಿಯಿಲ್ಲದ ಮೇಲೆ ಸ್ತ್ರೀಯರಿಗೆ ಮನೆಯೇ ಮಸಣ. ಎಲ್ಲಾ ಕಾಲದಲ್ಲಿಯೂ ಪತಿಯೊಡನೆ ಇರುತ್ತಾ ಪತಿಸೇವೆಯನ್ನು ಮಾಡುವ ಸ್ತ್ರೀಯರು ಎಷ್ಟು ಧನ್ಯರೋ! ಅಂತಹ ಪುಣ್ಯವನ್ನು ನಾನು ಪಡೆದಿಲ್ಲ. ಅಯ್ಯೋ, ನನ್ನ ಅಸ್ತಿಯೆ! ನನ್ನ ಆಸ್ತಿಯನ್ನು ಸುಡು. ನನ್ನ ಜೀವನವನ್ನೂ ನಿಂದಿಸು. ಇದೆಲ್ಲಕ್ಕೂ ಕಾರಣಭೂತವಾದ ನಾಚಿಕೆಯನ್ನು ಧಿಕ್!

ಪ್ರಭಾತ-ಈ ಕಲಿಗಾಲದಲ್ಲಿ ಹೆಂಗಸರ ಅಭಿಪ್ರಾಯವೇ ಒಂದುವಿಧ. ಮುಂದಣ ಆಲೋಚನೆಯು ಲೇಶವಾದರೂ ಇಲ್ಲ. ಯಾವಾಗ ಏನು ಮಾಡಬೇಕೆಂಬುದೂ ಗೊತ್ತಿಲ್ಲ. ಮನಬಂದ ಕೆಲಸ ಮಾಡಿಬಿಡುವರು. ಮುಂದಣ ಅನರ್ಥ ಪರಂಪರೆಗಳನ್ನು ತಿಳಿಸುಕೊಳ್ಳಬಲ್ಲರೆ! ಆದರೂ ಇನ್ನೂ ಒಂದುಸಾರಿ ಹೇಳುತ್ತೇನೆ. ಇದರ ಮೇಲೆ ನಿನ್ನ ಇಷ್ಟ. ನಿನಗೆ ಈ ವಯಸ್ಸಿನಲ್ಲಿ ಸನ್ಯಾಸಧರ್ಮವು ತಕ್ಕುದೆಂದು ತೋರುವುದಿಲ್ಲ. ಖಂಡಿತವಾಗಿಯೂ ನೀನು ಸನ್ಯಾಸವನ್ನು ತೆಗೆದುಕೊಳ್ಳಬೇಡ. ನಾನು ಹೆಚ್ಚಾಗಿ ಹೇಳಲಾರೆನು. ಅದರಿಂದ ನಿನಗೆ ಬಹು ಅನರ್ಥಗಳು ಉಂಟಾಗುವುವು.

ವಿಯೋಗಿನಿ--ನನ್ನ ವಯಸ್ಸಿಗೆ ಸನ್ಯಾಸಧರ್ಮವು ಯುಕ್ತವೊ ಅಯುಕ್ತವೊ ಅದನ್ನು ಕಟ್ಟಿಕೊಂಡೇನು? ಆದರೆ ನನ್ನ ಈಗಿನ ಅವಸ್ಥೆಗೆ ಮಾತ್ರ ಸನ್ಯಾಸವು ಯುಕ್ತವೇ ಸರಿ.

ಆದುದರಿಂದ ನನಗೆ ಸನ್ಯಾಸವು ಬೇಕೇ ಬೇಕು. ನಾನು ಆ ಸನ್ಯಾಸಿಗೆ ಸಹಧರ್ಮಿಣಿ. ಹಾಗೆ ಸನ್ಯಾಸಿನಿಯಾಗದೇ ಇದ್ದರೆ ನನ್ನ ಪಾತಿವ್ರತ್ಯಕ್ಕೆ ಕುಂದಕವುಂಟಾದೀತು. ಪಾತಿವ್ರತ್ಯಕ್ಕೆ ಕುಂದಕವನ್ನು ತಂದುಕೊಂಡೇ ಈ ಪ್ರಪಂಚದಲ್ಲಿ ಬದುಕಿರ ಬೇಕೆ ? ಪಾತಿವ್ರತ್ಯವನ್ನು ಸಂರಕ್ಷಿಸುವುದಕ್ಕಾಗಿ ಸನ್ಯಾಸಿನಿ ಯಾಗಿಯೇ ತೀರಬೇಕು.

ಹೀಗೆ ಹೇಳುತ ಹೇಳುತ ಆವಳ ನಿರ್ಮಲವಾದ ಕಣ್ಣು ಗಳಿಂದ ನೀರು ಕಟ್ಟೆಹರಿಯುವುದಕ್ಕೆ ಮೊದಲಾಯಿತು. ಕಂಠಪ್ರ ರುದ್ಧವಾಗಿ ಅಳುವು ಬಂದಿತು. ತಡೆಯಲಾಗಲಿಲ್ಲ. ಗಟ್ಟಿಯಾಗಿ ಅತ್ತುಬಿಟ್ಟಳು.

ಪ್ರಭಾತ—ನೋಡು. ಸನ್ಯಾಸಧರ್ಮವು ಬಹು ಕಠಿನ. ಕೆಂಪು ಬಟ್ಟೆಯನ್ನುಟ್ಟ ಮಾತ್ರದಿಂದಲೇ ಸನ್ಯಾಸಿನಿಯಾಗು ವಂತೆ ಭಾವಿಸಿದೆಯೋ ? ಮಿತಾಹಾರದಿಂದಲಾಗಲಿ, ನಿರಾಹಾರ ದಿಂದಲೇ ಆಗಲಿ, ಕಾಲವನ್ನು ಕಳೆದ ಮಾತ್ರಕ್ಕೆ ಸನ್ಯಾಸ ಧರ್ಮವನ್ನಾಚರಿಸಿದಂತಾಗಲಿಲ್ಲ. ಹಾಗೆ ಸನ್ಯಾಸಿಯಾಗ ಬೇಕಾದರೆ ಮನೋವೃತ್ತಿಯನ್ನು ಕೇಳು. ಇದ್ದಕ್ಕಿದ್ದಹಾಗೆ ಎಲ್ಲವನ್ನೂ ತ್ಯಾಗಮಾಡಿ ಬಿಡುವಷ್ಟು ಧೈರ್ಯವು ತಾನೆ ನಿನಗೆ ಎಲ್ಲಿಯದು ? ನೀನು ಕುಲಾಂಗನೆ. ಅಂತಃಪುರದಿಂದ ಹೊರಗೆ ಬಂದವಳೇ ಅಲ್ಲ. ಬರತಕ್ಕವಳೂ ಅಲ್ಲ. ಹೀಗಿರುವಲ್ಲಿ ಸ್ತ್ರೀಜನಸಾಧಾರಣವಾದ ನಾಚಿಕೆಯನ್ನು ಪರಿತ್ಯಜಿಸುವುದು ನಿನ್ನಿಂದಾಗುವುದೆಂದರೇನು ? ಹಾಗಿದ್ದ ಪಕ್ಷದಲ್ಲಿ ಮೊದಲೇ ಪರಿತ್ಯಜಿಸುತ್ತಿದ್ದೆ.

ವಿಯೋಗಿನಿ–ಕೋಪಿಸಿಕೊಳ್ಳಕೂಡದು. ನಿಮಗೆ ತಿಳಿಯದು. ಮೊದಲಿದ್ದ ಆ ನಾಚಿಕೆಯು ಈಗಲೂ ಇದೆಯೆಂದು ಭಾವಿಸಿರುವಿರೊ? ಆ ಹಾಳು ನಾಚಿಕೆಯೇ ಈ ಸರ್ವಸ್ವವನ್ನೂ ಹಾಳುಮಾಡಿತು. ಯಾವನು ಮೂರು ಲೋಕದಲ್ಲಿಯೂ ನನಗೆ ಸರಿಯಾಗಿದ್ದನೋ ಆ ನನ್ನ ಪ್ರಾಣೇಶ್ವರನನ್ನು ಹಾಳು ನಾಚಿಕೆಯೇ ಅಗಲಿಸಿತು. ಅನುಭವಿಸಲಿ. ಸಾಧ್ಯವಾದಷ್ಟು ನಷ್ಟಪರಂಪರೆಗಳನ್ನು ತಂದೊಡ್ಡಿದುದು ಆ ಹಾಳು ನಾಚಿಕೆಯೇ. ಇದಕ್ಕೋಸ್ಕರದೂಷಿಸಬೇಕಾದುದೂ ಆ ನಾಚಿಕೆಯನ್ನೇ. ಮುಂದೆಯೂ ಬಹು ಕಷ್ಟವುಂಟಾಗುವುದು ಆ ನಾಚಿಕೆಯಿಂದಲೇ. ಇನ್ನು ಆ ನಾಚಿಕೆಗೆ ನನ್ನಮನಸ್ಸಿನಲ್ಲಿ ಸ್ಥಳವನ್ನು ಕೊಡುವುದಿಲ್ಲ. ಅದನ್ನು ಬಿಟ್ಟುಬಿಟ್ಟೆನು.

ಪ್ರಭಾತನು ಅದನ್ನು ಕೇಳಿ ಮತ್ತಾವ ಮಾತನ್ನೂ ಆಡಲಿಲ್ಲ. ಹಾಗೆ ಮಾತನಾಡಿದರೆ ಪ್ರಯೋಜನವಿಲ್ಲವೆಂದೂ ತಿಳಿಯಿತು. ಮನಸ್ಸಿಗೆ ಬಹುವ್ಯಾಕುಲವಾಯಿತು. ಒಂದು ಸಾರಿ ನಿಟ್ಟುಸಿರನ್ನು ಬಿಟ್ಟು–ಹಾಗಾದರೆ ನಾನು ಹೊರಡುತ್ತೇನೆ; ಎಂದನು.

ವಿಯೋಗಿನಿ–ಯಾತಕ್ಕೋಸ್ಕರ ಕರೆಯಿಸಿದೆನೋ ಅದನ್ನು ಕೇಳದೆಯೇ ಹೊರಟುಹೋಗುವುದು ಉಚಿತವಲ್ಲ.

ಪ್ರಭಾತ–ಹಾಗಾದರೆ ಬೇಗಹೇಳಬಹುದು. ನಾನು ಈ ಹೊತ್ತು ನಿಂತಿರಲಾರೆನು.

ವಿಯೋಗಿನಿ–ಖಂಡಿತವಾಗಿಯೂ ಹೇಳುತ್ತೇನೆ. ನಾನು ಸನ್ಯಾಸಿನಿ. ನನ್ನ ಐಶ್ವರ್ಯವೆಲ್ಲಾ ನಿನ್ನ ಸ್ನೇಹಿತನದು. ನಿನ್ನ

ಸ್ನೇಹಿತನ ಸಂಪತ್ತಿನ ರಕ್ಷಣೆಯೆಲ್ಲಾ ನಿನ್ನನ್ನು ಸೇರಿದೆ. ನಾನು ಈಗಲೇ ಇಲ್ಲಿಂದ ಹೊರಟು ಹೋಗುತ್ತೇನೆ. ಈ ಸರ್ವಸ್ವಕ್ಕೂ ನೀನೇ ಯಜಮಾನ. ನಿನ್ನ ಇಷ್ಟವಿದ್ದಂತೆ ಅದನ್ನು ವಿನಿಯೋಗಿಸಬಹುದು. ಇದಕ್ಕೇನೂ ಅಡ್ಡಿಯಿಲ್ಲ. ಎಂದು ಹೇಳಿ ವಿಯೋಗಿನಿಯು ತನ್ನ ಕೈಯಿಂದಲೇ ಒಂದು ಪತ್ರವನ್ನು ಬರೆದು ಪ್ರಭಾತನ ಮುಂದೆ ಇಟ್ಟುಬಿಟ್ಟು ಮಿಂಚಿನ ಹಾಗೆ ಅಲ್ಲಿಂದ ಮಾಯವಾಗಿ ಹೊರಟು ಹೋದಳು.

ಪ್ರಭಾತನು ಆ ಪತ್ರವನ್ನು ತೆಗೆದುಕೊಂಡು ನೋಡಿದನು. ಆ ಪತ್ರದಲ್ಲಿ—ನನ್ನ ಅಪಾರವಾದ ಐಶ್ವರ್ಯವನ್ನೆಲ್ಲಾ ಮನಃಪೂರ್ವಕವಾಗಿ ನಿನಗೆ ಕೊಟ್ಟಿರುತ್ತೇನೆ. ಇದರ ಮೇಲೂ ಎಲ್ಲಾ ಯಾಜಮಾನ್ಯವೂ ನಿನ್ನನ್ನೇ ಸೇರಿದ್ದು. ಇದಕ್ಕೆ ಇನ್ನಾರ ಅಡ್ಡಿಯೂ ಇಲ್ಲ. ಇದರಲ್ಲಿ ಆವಸಂಶಯವೂ ಇರು, ವುದಿಲ್ಲ-ಎಂದು ಬರೆದಿತ್ತು. ಪ್ರಭಾತನು ಅದನ್ನು ನೋಡಿ ತಲೆ ತಿರುಗಿ, ಅಲ್ಲಿಂದೆದ್ದು ಮನೆಗೆ ಹೊರಟು ಹೋದನು.

ವಿಯೋಗಿನಿಯು ಹೊರಟುಹೋದಳೆಂದು ಹೇಳಿದೆಯಷ್ಟೆ. ಆ ಸಂದರ್ಭವನ್ನು ಜ್ಞಾಪಕಕ್ಕೆ ತಂದುಕೊಳ್ಳಿರಿ. ಇದುವರೆಗೂ ಅವಳು ಐಶ್ವರ್ಯಾಧಿಕಾರಿಣಿಯಾಗಿದ್ದಳು. ಇಂದಿನಿಂದ ಅದು ತಪ್ಪಿಹೋಯಿತು. ಈಗ ಅವಳು ಸನ್ಯಾಸಿನಿ. ಇದುವರೆಗೂ ಅವಳ ಮೈಮೇಲೆ ಸೊಗಸಾದ ಪೀತಾಂಬರ. ಇಂದಿನಿಂದ ಅವಳ ಮೈಮೇಲೆ ಕಾಷಾಯ; ಇದುವರೆಗೂ ಅವಳ ಕೈಯಲ್ಲಿ ಚಿನ್ನದ ಪಾತ್ರೆ, ಇಂದಿನಿಂದ ಕಮಂಡಲು. ಇದುವರೆಗೂ ರತ್ನದ ತೊಡುಗೆಗಳು. ಇಂದಿನಿಂದ ದೊಡ್ಡ ದಂಡ.

ಇದುವರೆಗೂ ಅವಳ ಹಣೆಯಲ್ಲಿ ಕಸ್ತೂರೀ ತಿಲಕ. ಇಂದಿನಿಂದ ವಿಭೂತಿ. ವೇಷಮಾತ್ರದಿಂದಲೇ ಅಲ್ಲ. ಮನಃಪೂರ್ವಕವಾಗಿ ಸನ್ಯಾಸಿನಿ. ಅಯ್ಯೋ ! ವಿಯೋಗಿನಿಯು ದಿಟವಾಗಿಯೂ ಇಂದಿನಿಂದ ಒಂದು ಬಗೆಯ ಹುಚ್ಚಿಯಾದಳು. ನಿಲ್ಲುವುದಕ್ಕೆ ಸ್ಥಳವಿಲ್ಲ. ಹೊದೆಯುವುದಕ್ಕೆ ಒಳ್ಳೇ ಬಟ್ಟೆಗಳಿಲ್ಲ. ತಿನ್ನುವುದಕ್ಕೆ ಅನ್ನವಿಲ್ಲ. ಊರೂರನ್ನು ಅಲೆವುದಕ್ಕೆ ಮೊದಲು ಮಾಡಿದಳು. ಇದಕ್ಕೆ ಮೊದಲ ಆ ಪೂರಿನಲ್ಲಿಯೇ ಇದ್ದ ಗುರುವಿನ ಅಪ್ಪಣೆಯನ್ನು ತೆಗೆದು ಕೊಳ್ಳಬೇಕೆಂದು ಆ ಗುರುವಿನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿದಳು.

ಗುರು--(ಆಶ್ಚರ್ಯದಿಂದ) ಅಮ್ಮಾ ! ಇದೇನು ಈ ವೇಷ?

ವಿಯೋಗಿನಿ--ಇದು ನನಗೆ ಉಚಿತವಾದ ವೇಷವೇ ಸರಿ. ನಾನು ಸನ್ಯಾಸಿಯ ಸಹಧರ್ಮಿಣಿ.

ಗುರು-ಅಯ್ಯೋ ವಯಸ್ಸೆ ! ನೀನು ಹಾಗೆಲ್ಲಾ ಮಾಡಿದರೆ ಲೋಕದ ಜನಗಳ ನಿಂದೆಗೆ ಗುರಿಯಾಗುವದಿಲ್ಲವೆ ?

ವಿಯೋಗಿನಿ-ಬೇಕಾದಷ್ಟು ನಿಂದಿಸಲಿ. ಲೋಕವೇಬೇಡದ ನನಗೆ ಲೋಕದವರ ಆಡಿಕೆಯಿಂದ ಆಗುವುದೇನು ?

ಎಂದು ಆ ಗುರುವಿನೊಡನೆ ಎಲ್ಲಾ ಸಮಾಚಾರವನ್ನೂ ತಿಳಿಯಿಸಿ ಮತ್ತೆ—ಗುರುದೇವ ! ತಾವು ಕಾಶಿಯಲ್ಲಿ ಬಹು ದಿನ ವಾಸಮಾಡಿರುವಿರಿ. ಕಾಶೀಕ್ಷೇತ್ರದಲ್ಲಿ ವಾಸಮಾಡಿಕೊಂಡಿರುವುದಕ್ಕೆ ನನಗೂ ಒಂದು ಅನುಕೂಲವಾದ ಸ್ಥಳವನ್ನು

ಕಲ್ಪಿಸಿ ಕೊಡಬಾರದೆ ? ಎಂದು ಅವನ ಕಾಲನ್ನು ಹಿಡಿದು ಬೇಡಿಕೊಂಡಳು.

ಗುರುವಿಗೆ ಏನೂ ತೋಚಲಿಲ್ಲ. ಅನ್ಯಮನಸ್ಕನಾಗಿ ಏನೋ ಯೋಚನೆ ಮಾಡತೊಡಗಿದನು.

ವಿಯೋಗಿನಿ-ಗುರುದೇವ ! ಏತಕ್ಕೆ ಸಾವಕಾಶ ? ನಾನು ಮೃತ್ಯುವನ್ನು ಅತಿಕ್ರಮಿಸಿರುವೆನು. ಪ್ರಪಂಚದಲ್ಲಿರುವ ಮತ್ತಾವ ಶಕ್ತಿಯೂ ನನ್ನನ್ನು ಉದ್ದೇಶದಿಂದ ಹಿಂದಿರುಗಿಸ ಲಾರದು.

ಗುರುವಿನ ಬಾಯಿಂದ ಯಾವ ಮಾತೂ ಹೊರಡಲಿಲ್ಲ. ಜಗಚ್ಚಕ್ಷುವಾದ, ಕರ್ಮಸಾಕ್ಷಿಯಾದ ಸೂರ್ಯನನ್ನು ಕ್ಷಣ ಕಾಲ ನೋಡುತ್ತಿದ್ದು ಅಲ್ಲಿಂದೆದ್ದು ಹೊರಟನು. ಅವಳೂ ಅವನ ಹಿಂದೆಯೇ ಹೊರಟಳು. ಅಲ್ಲಿ ನೋಡುತ್ತಿದ್ದವರೆಲ್ಲರೂ ಇವಳು ಸಾಧಾರಣಳಲ್ಲ, ಕೈಲಾಸವಾಸಿನಿಯಾದ ಸಾಕ್ಷಾತ್ ದಾಕ್ಷಾಯಣಿಯೇ ಸರಿ ಎಂದುಕೊಂಡು ಬೆರಗಾಗಿ ಹೋದರು.

ವಿಯೋಗಿನಿ ! ನಿನ್ನ ತಂದೆಯು ನಿನಗಿಟ್ಟಿದ್ದ ಹೆಸರು ಸಾರ್ಥಕವಾಯಿತು. ಇಂದು ನೀನು ಅನ್ವರ್ಥನಾಮಳಾದೆ.

---

## ಎಂಟನೆಯ ಪರಿಚ್ಛೇದ.

ಸನ್ಯಾಸಿನಿಯಾದ ವಿಯೋಗಿನಿಯು ಇಂದಿನಿಂದ ಕಾಶೀ ವಾಸಿನಿಯಾದಳು. ಪ್ರತಿದಿನವೂ ಬೆಳಗ್ಗೆ ಗಂಗಾಸ್ನಾನ, ಆಮೇಲೆ ದೇವರ ದರ್ಶನ, ಇವೇ ಅವಳ ಮುಖ್ಯಕಾರ್ಯಗಳಾಗಿ

ದ್ದವು. ಇಷ್ಟುಮಾತ್ರವೇ ಅಲ್ಲ. ಕಾಶೀಧಾಮದಲ್ಲಿದ್ದ ಸಮಸ್ತ ಸಾಧುಜನರನ್ನೂ ಯಾವಾಗಲೂ ಸೇವಿಸುತ್ತಿರುವಳು. ಇಷ್ಟೆಲ್ಲಾ ಏಕೆ ? ಒಂದಾನೊಂದು ಕಾಲದಲ್ಲಿಯಾದರೂ ತನ್ನ ಗಂಡನ ಸಂದರ್ಶನವು ಆದೀತೆಂಬ ಆಸೆಯು ಇನ್ನೂ ಇವಳನ್ನು ಬಿಟ್ಟಿ ರಲಿಲ್ಲ. ಆಯಿತು. ಕಾಶೀವಾಸಮಾತ್ರದಿಂದಲೇ ಆ ಪತಿಯು ದರ್ಶನವು ಲಭಿಸುವದಕ್ಕೆ ಅವಕಾಶವುಂಟೇ. ಉಂಟು. ಕಾಶೀ ಕ್ಷೇತ್ರವು ಬಹುಕಾಲದಿಂದಲೂ ಸಾಧು ಜನಗಳಿಗೆ ಆಶ್ರಯ ವಾದುದು. ಸಕಲಸಾಧುಗಳೂ ತಂತಮ್ಮ ಜನ್ಮ ಸಾರ್ಥಕ ಕ್ಕೋಸ್ಕರ ಅಲ್ಲಿಯೇ ವಾಸಮಾಡುವರು. ಸದ್ಯಕ್ಕೆ ಇಲ್ಲದಿ ದ್ದರೂ ಮುಂದಾದರೂ ತನ್ನ ಇಷ್ಟಾರ್ಥವು ಕೈಗೂಡಿಯೇ ಗೂಡುವುದು, ಎಂಬ ಭರವಸೆಯಿಂದ ಆ ಕಾಶಿಯಲ್ಲಿಯೇ ವಾಸಮಾಡುತ್ತಿದ್ದಳು. ಹೀಗೆಯೇ ಒಂದು ವರುಷವು ಕಳೆದು ಹೋಯಿತು. ಇವಳ ಕೋರಿಕೆಯು ಮಾತ್ರ ಕೈಗೂಡಲಿಲ್ಲ.

ಹೀಗೆಯೇ ಇರುತ್ತಿರುವಾಗ ಒಂದಾನೊಂದು ದಿನ ವಿಯೋಗಿನಿಯು ಎಂದಿನಂತೆಯೇ ಗಂಗಾಸ್ನಾನ ಮಾಡಲು ದಶಾಶ್ವಮೇಧಘಟ್ಟಕ್ಕೆ ಹೋದಳು. ಇದ್ದಕ್ಕಿದ್ದಹಾಗೆಯೆ ಚಕಿತ ಳಾಗಿ ಯಾವುದೋ ಒಂದು ಕಡೆ ದೃಷ್ಟಿಯಿಟ್ಟು ನೋಡಿದಳು. ಬಲು ಹೊತ್ತು ನಿಂತಿರಲಾಗಲಿಲ್ಲ. ಕೂಡಲೇ ಕೆಳಗೆ ಬಿದ್ದು ಬಿಟ್ಟಳು. ಎಚ್ಚರಿಕೆಯು ತಪ್ಪಿಹೋಯಿತು. ಆಗ ಆ ಘಟ್ಟದಲ್ಲಿ ಅನೇಕ ಜನರಿದ್ದರು. ಅವರೆಲ್ಲರೂ ಬೇಗನೆ ಓಡಿಬಂದು ಈಕೆಗೆ ಮೂರ್ಛೆ ತಿಳಿಯಲು ಬೇಕಾದ ಉಪಚಾರಗಳನ್ನು ಮಾಡಿದರು. ಇವಳು ಎಚ್ಚೆತ್ತಳು. ಆದರೆ ಇವಳು ಏತಕ್ಕೆ

ಮೂರ್ಛಿತಳಾದಳೆಂಬುದು ಮಾತ್ರ ಯಾರಿಗೂ ಗೊತ್ತಾಗಲಿಲ್ಲ.

ಎದ್ದು ಮೆಲ್ಲ ಮೆಲ್ಲನೆ ನಡೆಯುತ, ತಾನು ಯಾವ ಕಡೆಯನ್ನು ನೋಡಿ ಮೂರ್ಛಿತಳಾದಳೋ ಅದೇ ಕಡೆಗೆ ಹೋದಳು. ಸ್ವಲ್ಪದೂರ ಹೋದ ಮೇಲೆ ನಡಿಗೆಯು ಮೆಲ್ಲನಾಯಿತು. ಹಾಗೂ ಸ್ವಲ್ಪದೂರ ನಡೆದಳು. ಕೊನೆಗೆ ಕಾಲೇ ಬರಲಿಲ್ಲ. ಆದರೂ ಬಹು ಕಷ್ಟದಿಂದ ದಾರಿಯನ್ನು ಸಾಗಿಸಿ ಅಲ್ಲೊಂದು ಕಡೆ ನಿಂತಳು. ಒಬ್ಬ ಸನ್ಯಾಸಿಯು ಮಾತ್ರ ಅಲ್ಲಿ ಕುಳಿತಿದ್ದನು. ಸುತ್ತಲೂ ನೋಡಿದಳು. ಇನ್ನಾರೂ ಇರಲಿಲ್ಲ. ಆ ಸನ್ಯಾಸಿಯ ಹತ್ತಿರ ಕುಳಿತುಕೊಂಡಳು. ಇವಳನ್ನು ಸನ್ಯಾಸಿಯು ನೋಡಲಿಲ್ಲ. ಧ್ಯಾನಪರನಾಗಿದ್ದನು. ಒಂದು ಗಳಿಗೆಯಾಯಿತು. ಸನ್ಯಾಸಿಯು ಕಣ್ಣು ತೆರೆಯಲಿಲ್ಲ. ಎರಡು ಗಳಿಗೆಯಾಯಿತು. ಸನ್ಯಾಸಿಯು ಕಣ್ಣು ತೆರೆಯಲಿಲ್ಲ. ಇನ್ನೂ ಹೊತ್ತಾಯಿತು. ಸನ್ಯಾಸಿಯ ಕಣ್ಣು ತೆರೆಯಲಿಲ್ಲ, ಹೀಗೆಯೇ ಮಧ್ಯಾಹ್ನವೂ ಆಯಿತು. ಸನ್ಯಾಸಿಯು ಕಣ್ಣುತೆರೆಯಲೇ ಇಲ್ಲ.

ಗಗನಮಣಿಯಾದ ಸೂರ್ಯನಿಗೆ ಅತ್ಯುಚ್ಚವಾದ ಯೌವನಾವಸ್ಥೆಯೂ ಒದಗಿತ್ತು. ಆ ಯೌವನಕ್ಕೆ ಮಿತಿಯೇ ಇರಲಿಲ್ಲ. ಅವನ ಸ್ಥಿತಿಯಿಂದ ಪ್ರಪಂಚವೇ ತಲ್ಲಣಿಸುತಿದ್ದಿತು. ಯಾವದೊಂದು ಪ್ರಾಣಿಯೂ ಹೊರಗೆ ಹೊರಡುವುದಕ್ಕೆ ಹೆದರುತ್ತಿತ್ತು. ಅವನ ಔದ್ಧತ್ಯವನ್ನು ಯಾರುತಾನೇ ತಗ್ಗಿಸಬಲ್ಲರು. ಯಾರು ತಾನೆ ಸಹಿಸಬಲ್ಲರು. ಸ್ವಲ್ಪವಾದರೂ ಮರುಕವೇ ಇಲ್ಲದೆ ದಿನಮಣಿಯು ನಿರಂಕುಶಪ್ರವರ್ತನದಿಂದ

ಗಗನ ಸಾಮ್ರಾಜ್ಯದಲ್ಲಿ ಅಧಿಷ್ಠಿತನಾಗಿ ಲೋಕಗಳೆಲ್ಲವನ್ನೂ ದಮನಮಾಡುತ್ತಿದ್ದನು. ಆ ವೇಧೆಯನ್ನು ಯಾರು ತಾನೇ ಸೈರಿಸಬಲ್ಲರು! ಹೀಗಿದ್ದರೂ ಸನ್ಯಾಸಿಗೆಮಾತ್ರ ಅದಾವಕಾರಣದಿಂದಲೋ ಅಷ್ಟು ಬಿಸಿಲಿನ ತಾಪವೂ ಹಿತಕರವಾಗಿಯೇ ಇದ್ದಿತು. ಸನ್ಯಾಸಿನಿಯು ಆ ಸ್ಥಳದಲ್ಲಿಯೇ ದೃಢಪ್ರತಿಜ್ಞಳಾಗಿ ಕುಳಿತುಬಿಟ್ಟಳು. ಮಧ್ಯಾಹ್ನವೂ ಮೀರಿಹೋಯಿತು, ಸನ್ಯಾಸಿಯು ಇನ್ನೂ ಬಹಿರ್ಮುಖನಾಗಲೇ ಇಲ್ಲ. ಸನ್ಯಾಸಿನಿಯಾದರೋ ಅಡಿಗಡಿಗೂ ನಿಟ್ಟುಸಿರನ್ನು ಬಿಡುತ ಎಷ್ಟು ಹೊತ್ತಿಗೆ ಸನ್ಯಾಸಿಯು ಬಹಿರ್ಮುಖನಾಗುವನೋ ಎಂದು ನಿರೀಕ್ಷಿಸುತಲೇ ಇದ್ದಳು. ಸಂಜೆಯು ಸಮೀಪಿಸುತ ಬಂದಿತು. ಅದರೂ ಸನ್ಯಾಸಿಯು ಕಣ್ಣು ತೆರೆಯಲಿಲ್ಲ. ಇವಳ ಉದ್ದೇಶವು ಮೀರಿ ದಪ್ಪಿತು. ಆದರೂ ಮನಸ್ಸನ್ನು ಬಿಗಿ ಹಿಡಿದುಕೊಂಡು ಇನ್ನೂ ಕಾದಿದ್ದಳು. ಸಂಜೆಯೂ ಆಯಿತು. ಇನ್ನು ತಡೆಯಲಾರದೆ ಆ ಸನ್ಯಾಸಿಯ ಪಾದತಲದಲ್ಲಿ ಹೋಗಿ ಬಿದ್ದಳು. ಒಡನೆಯೇ ಅವನಿಗೆ ಧ್ಯಾನಭಂಗವಾಯಿತು. ಕಣ್ಣು ಬಿಟ್ಟು ನೋಡಿದನು. ದಂಡಾಕಾರವಾಗಿ ಇವಳು ಬಿದ್ದಿದ್ದಳು. ಆಶ್ಚರ್ಯಪಟ್ಟು ಇದೇನು ಕಾರಣದಿಂದ ಈಕೆಯು ಈರೀತಿ ಬಿದ್ದಿರುವಳು, ಎಂದು ಯೋಚಿಸಿ-ನೀನು ಯಾರು? ನಿನಗೇನಾಗಬೇಕು? ಇದೇಕೆ ಹೀಗೆ ಬಿದ್ದಿರುವೆ? ಎಂದು ಕೇಳಿದನು. ಸನ್ಯಾಸಿನಿಯು ಉತ್ತರವನ್ನು ಕೊಡಲಿಲ್ಲ.

ಸನ್ಯಾಸಿ--ನೀನು ಯಾರು? ನಿನಗೇನಾಗಬೇಕು.

ಸನ್ಯಾಸಿನಿ--(ಬಹುಕಷ್ಟದಿಂದ) ನಾನು ಆರಾದರೇನು?

ನಾನೊಬ್ಬ ಸನ್ಯಾಸಿನಿ. ನನಗಾಗಬೇಕಾದುದೂ ಇನ್ನೇನು ಇಲ್ಲ; ಹೆಚ್ಚಾಗಿ ಮಾತನಾಡಲೂ ಆರೆನು. ನನ್ನಜೀವವಿರುವವರೆಗೂ ನಿಮ್ಮ ಚರಣ ಸನ್ನಿಧಿಯಲ್ಲಿ ಶಿಷ್ಯಳಾಗಿ ವಾಸಮಾಡಿಕೊಂಡಿರುವೆನು. ಇದಕ್ಕೆ ಅಪ್ಪಣೆಯನ್ನು ಕೊಡಬೇಕು.

ಸನ್ಯಾಸಿ—ಸನ್ಯಾಸಿಯು ಸನ್ಯಾಸಿನಿಯನ್ನು ಶಿಷ್ಯಳಾಗಿ ಮಾಡಿಕೊಳ್ಳುವುದು ಯುಕ್ತವೆ? ಎಲ್ಲಿಯಾದರೂ ಉಂಟೆ? ಹಾಗೆ ಮಾಡಿದರೆ ನನ್ನ ಧರ್ಮಕ್ಕೆ ಲೋಪಬಂದೀತು.

ಸನ್ಯಾಸಿನಿ—ನನ್ನನ್ನು ಶಿಷ್ಯೆಯಾಗಿ ಅಂಗೀಕರಿಸಿದರೆ ತಮ್ಮ ಧರ್ಮಕ್ಕೆಂದಿಗೂ ಲೋಪಬಾರದು.

ಸನ್ಯಾಸಿ-ಅದು ಹೇಗೆ?

ಸನ್ಯಾಸಿನಿ—(ಎದ್ದು) ಈ ಸನ್ಯಾಸಿನಿಯು ಯಾರೆಂಬುದನ್ನು ತಾವು ಗೊತ್ತುಮಾಡಿಕೊಳ್ಳಲಾರರೇ ಹೇಳಿರಾ?

ಸನ್ಯಾಸಿ—(ಬಲುಹೊತ್ತುಯೋಚಿಸಿ) ನಿನ್ನನ್ನು ಎಲ್ಲಿಯೋ ನೋಡಿದಂತಿದೆ. ಆದರೆ ಇಂತಹ ಬಳಿಯೆಂಬುದನ್ನೂ ಇಂತಹಳೇ ಎಂಬುದನ್ನೂ ಗೊತ್ತುಮಾಡಲಾರೆ.

ಸನ್ಯಾಸಿನಿಗೆ ಆಕಾಶವೇ ತಲೆಯಮೇಲೆ ಬಿದ್ದುಹೋಯಿತು, ಇದಿರಿಗೆ ಹರಿಯುತಲಿದ್ದ ಗಂಗಾ ಪ್ರವಾಹವು ಕಣ್ಣಿನಿಂದಲೇ ಹೊರಟಿತು. ಇದನ್ನು ನೋಡಿ ಸನ್ಯಾಸಿಯು ಅವಳನ್ನು ಸಮಾಧಾನ ಪಡಿಸಲು ಪ್ರಯತ್ನಿಸಿ-ನೀನು ಪರಿಚಿತಳೇ ಆಗು, ಅಪರಿಚಿತಳೇ ಆಗು, ಏನೇ ಆಗಲಿ, ಶಿಷ್ಯೆಯಾಗಿ ಅಂಗೀಕರಿಸಲಾರೆನು ಅದು ಅಧರ್ಮ, ಎಂದನು, ಒಡನೆಯೇ ಸನ್ಯಾಸಿನಿಯು ಗಟ್ಟಿಯಾಗಿ ಅಳುತ್ತಾ ಪ್ರಭು! ನಿನ್ನ ದಾಸಿ, ಸಹ

ಧರ್ಮಿಣಿ, ನಿನ್ನ ಶಿಷ್ಯೆ, ಸಾವಿರ ಮಾತೇನು, ನಿನ್ನ ಅರ್ಧಾಂಗಿ, ಎಂದು ಹೇಳಿದಳು.

ಸನ್ಯಾಸಿ-(ಸ್ತಬ್ಧನಾಗಿ) ಏನು ಏನು, ನೀನು ವಿಯೋಗಿನಿಯೋ!

ಸನ್ಯಾಸಿನಿ--ಹತಭಾಗ್ಯೆ, ವಿಯೋಗಿನಿಯಲ್ಲ.

ಆ ಕ್ಷಣದಲ್ಲಿಯೇ ಆಂತಹ ಸನ್ಯಾಸಿಗೆ ಮನಸ್ಸಿನಲ್ಲಿ ಒಂದು ಬಗೆಯಾದ ವ್ಯಸನವು ತಲೆದೋರಿತು. ಆದರೂ ಸ್ಥಿರ ಮನಸ್ಕತೆಯಿಂದ ಹೊರಗೆ ತೋರಗೊಡದೆ ಬಹು ಕಷ್ಟದಿಂದ ಸಂವರಣಮಾಡಿಕೊಂಡು, ಸನ್ಯಾಸಿಯು

ವಿಯೋಗಿನಿ! ಇದೇನು ಈ ವೇಷ? ಎಂದು ಕೇಳಿದನು.

ಸನ್ಯಾಸಿನಿ-ಪ್ರಭು! ತಮಗೆ ಅನುರೂಪವಾದ ವೇಷ. ಯಾವ ದಿನ ನನ್ನ ನಾಚಿಕೆಯು ತಮ್ಮನ್ನು ಈ ಅವಸ್ಥೆಗೆ ಗುರಿಮಾಡಿತೋ, ಅದು ನನಗೆ ಗೊತ್ತಾದಾಗಿನಿಂದ ನಾನು ಆ ಲಜ್ಜೆಗೆ ತಿಲೋದಕವನ್ನು ಕೊಟ್ಟು ಈ ವೇಷವನ್ನು ಸ್ವೀಕರಿಸಿದೆನು.

ಸನ್ಯಾಸಿ-ವಿಯೋಗಿನಿ! ನೀನು ಪುನಃ ಮನೆಗೆ ಹೋಗು. ನಾನುಹೇಳುವ ಮಾತನ್ನು ಕೇಳು. ನನ್ನನ್ನು ಹೊಂದುವ ಆಸೆಯು ಬೇಡ. ಪ್ರಪಂಚದಲ್ಲಿ ನನಗೆ ಜಿಹಾಸೆ ಹುಟ್ಟಿದೆ. ಆದ ದರಿಂದಲೇ ಅದನ್ನು ದೂರಮಾಡಿ ಇಷ್ಟು ದೂರ ಬಂದಿದೇನೆ. ಇಲ್ಲಿಂದ ಹಿಂದಿರುಗಲಾರೆ.

ಸನ್ಯಾಸಿನಿ—ಜೀವಿತೇಶ! ನೀನೇ ನನಗೆ ಸಕಲ ಧರ್ಮಸ್ವರೂಪನಾದವನು. ನಿನ್ನನ್ನು ಬಿಟ್ಟು ಮನೆಗೆ ಹೋದರೆ ನನಗೆ ಧರ್ಮವೆಲ್ಲಿಯದು?

ಸನ್ಯಾಸಿ--ಸಂಸಾರ ಧರ್ಮವನ್ನು ಪಾಲನೆ ಮಾಡಿ ಕೊಂಡಿರು.

ಸನ್ಯಾಸಿನಿ—ಏನು? ನೀನಿಲ್ಲದೆ ಸಂಸಾರವೇ?

ಸನ್ಯಾಸಿ--ಸಂಸಾರದಲ್ಲಿ ಸ್ವಜನಗಳಿಗೇನೂ ಕೊರತೆ ಯಿಲ್ಲ. ಐಶ್ವರ್ಯಕ್ಕೂ ಕೊರತೆಯಿಲ್ಲ. ಇವೆಲ್ಲವನ್ನೂ ಕೂಡಿ ಕೊಂಡು ಸಂಸಾರಧರ್ಮವನ್ನೇಕೆ ಆಚರಿಸಬಾರದು?

ಸನ್ಯಾಸಿನಿ--ಅಂತರ್ಯಾಮಿಯಾದ ಸ್ವಾಮಿಯೇ! ನೀನು ಆವುದನ್ನೂ ಕಾಣದವನಲ್ಲ. ಎಲ್ಲವನ್ನೂ ತಿಳಿದೇ ಇರುವೆ. ನಿನ್ನೊಡನೆ ಚರ್ಚಿಸಲು ನಾನೆಷ್ಟರವಳು. ಸ್ತ್ರೀಯರಿಗೆ ಪತಿ ಸೇವೆಯಿಲ್ಲದೆ ಸಂಸಾರವು ಉಂಟೆ? ಅಂತಹುದು ಸಂಸಾರ ವಲ್ಲ. ನಿಸ್ಸಾರ.

ಸನ್ಯಾಸಿ—ಅಯ್ಯೋ, ಮೂಢಳೇ! ಇದೇ ಬುದ್ಧಿಯು ಮೊದಲೇ ಇದ್ದಿದ್ದರೆ ಈ ಅನರ್ಥಗಳೆಲ್ಲಾ ಒದಗುತ್ತಿದ್ದವೆ? ಸ್ತ್ರೀಯರು ಸಹಜವಾದ ನಾಚಿಕೆಯನ್ನು ಸಮಯವರಿತು ಒಡವೆ ಯಂತೆ ಉಪಯೋಗಿಸಿಕೊಳ್ಳುವರು. ನೀನು ಸಮಯವನ್ನ ರಿಯದೆ ನಿನ್ನ ಸರ್ವನಾಶಕ್ಕೇ ಉಪಯೋಗಿಸಿಕೊಂಡೆ. ಅದು ಹೋಗಲಿ, ವಿಯೋಗಿನಿ! ನೀನು ಸುಮ್ಮನೆ ಕಾಡಬೇಡ. ಖಂಡಿ ತವಾಗಿ ಹೇಳುತ್ತೇನೆ. ಮತ್ತೆ ನಾನು ಗೃಹಸ್ಥನಾಗುವುದಿಲ್ಲ. ಆ ಆಸೆಯನ್ನು ಬಿಟ್ಟು ಬಿಡು; ಸುಮ್ಮನೆ ಹೊರಟುಹೋಗು.

ಸನ್ಯಾಸಿನಿ--ನನಗೆ ಸಂಸಾರದಲ್ಲಿ ಇಷ್ಟವೂಯಿಲ್ಲ. ನಾನು ಹಿಂದಿರುಗಿ ಹೋಗುವುದೂ ಇಲ್ಲ. ನಾನು ನಿನ್ನೊಡ

ನೆಯೋ ಸನ್ಯಾಸಧರ್ಮಕ್ಕನುಸಾರವಾಗಿ ಸಹಧರ್ಮಿಣಿಯಾಗಿ ಇರುವೆನು.

ಸನ್ಯಾಸಿ—ಮೊದಲೇ ಹೇಳಿರುವೆನು. ಯಾವ ಬಗೆಯಾಗಿಯೂ ನಿನ್ನನ್ನು ಗ್ರಹಣಮಾಡಲಾರೆನು. ಸನ್ಯಾಸಿಗೆ ಸಹಧರ್ಮಿಣಿಯೆಂದರೇನು? ಗೃಹಿಗಾದರೆ ಸಹಧರ್ಮಿಣಿ, ನಾನು ಗೃಹಿಯಲ್ಲ. ವಿಯೋಗಿನಿ! ಇಷ್ಟು ಹೇಳಿದರೂ ನನ್ನನ್ನು ಪೀಡಿಸಬೇಡ. ಮನೆಗೆ ಹೋಗು. ನಿನ್ನ ಮನಸ್ಸಿಗೆ ನನ್ನ ಅಡ್ಡಿಯಿಲ್ಲ. ಇಷ್ಟಕ್ಕೂ ನಿನ್ನನ್ನು ಅಡ್ಡಿಮಾಡಲು ನಾನು ತಾನೆ ಯಾರು? ಇದೇ ಕಡೆಯಮಾತು. ಇನ್ನು ಈ ಸ್ಥಳದಲ್ಲಿ ಸ್ವಲ್ಪ ಹೊತ್ತೂ ನೀನು ನಿಲ್ಲಕೂಡದು.' ದಯವಿಟ್ಟು ಹೊರಟುಹೋಗು. ಹಾಗೆ ನೀನು ಹೋಗದೇ ಇದ್ದರೆ ನಾನೇ ಹೊರಟು ಹೋಗುತ್ತೇನೆ.

ವಿಯೋಗಿನಿಯು ಒಂದು ದಿನ ವಿಲ್ಲದಿದ್ದರೆ ಒಂದು ದಿನವಾದರೂ ತನ್ನ ಮನೋವಲ್ಲಭನನ್ನು ಹೊಂದುವೆನೆಂಬ ಆಸೆಯನ್ನು ಇಟ್ಟುಕೊಂಡಿದ್ದಳು. ಆ ಆಸೆಯು ಇನ್ನೇಕೆ? ಪ್ರಪಂಚವೇ ಬಯಲಾಗಿ ಹೋಯಿತು. ಸ್ವಾಮಿಯು ಅವಳನ್ನು ಅಂಗೀಕರಿಸಲಿಲ್ಲ. ಇನ್ನು ಈ ಪ್ರಾಣದಿಂದೇನು? ಸನ್ಯಾಸಿಯು ಹಾಗೆ ಹೇಳಿಬಿಟ್ಟನೋ ಇಲ್ಲವೋ, ಆ ಕೂಡಲೆ ಮತ್ತಾವ ಮಾತನ್ನೂ ಆಡದೆ ಅಲ್ಲಿಂದ ಹೊರಟು ಪ್ರವಾಹದ ಬಳಿಗೆ ಬಂದಳು. ಆ ಹೊತ್ತಿಗೆ ರಾತ್ರಿ ಹತ್ತುಗಳಿಗೆ ಯಾಗಿದ್ದಿತು. ರಾತ್ರಿಯೋ ಆದರೂ ಕತ್ತಲೆಗೇನೂ

ಯೌಜವಮಾನ್ಯವಿರಲಿಲ್ಲ. ನಿಶಾಕಾಂತನಾದ ಚಂದ್ರನು ತನ್ನ ರಮಣಿಯನ್ನು ಧಿಕ್ಕರಿಸಿ ಅವಳನ್ನು ಕಾಡು ಪಾಲು ಮಾಡ ಬಿಟ್ಟಿರಲಿಲ್ಲ. ಏಕೆಂದರೆ ಕಾಳೀಕಿಶೋರನಂತೆ ಅವನು ಸನ್ಯಾಸಿಯಾಗಿದ್ದನೆ? ಬಹು ವಿನೋದವಾಗಿ ರಜನಿಯೊಡನೆ ಸರಸ ಸಲ್ಲಾಪಪೂರ್ವಕವಾಗಿ ಕ್ರೀಡಿಸುತ್ತಿದ್ದನು. ಎಲ್ಲಿ ನೋಡಿದರೂ ಹಾಲನ್ನು ಚೆಲ್ಲಿದಂತೆ ಬೆಳದಿಂಗಳು ಬಿದ್ದಿದ್ದುದಕಾರಣ ಆ ರಾತ್ರಿಯು ಸತ್ವಗುಣೋಪೇತನಾದ ಭಗವಂತನನ್ನು ಅನುಕರಣ ಮಾಡಿತ್ತು. ಎಷ್ಟುದೂರ ನೋಡಿದರೂ ಹಾಲಿನಂತೆ ಮನೋಹರವಾದ ನೀರಿನ ಪ್ರವಾಹ. ಇದೆಲ್ಲವನ್ನೂ ನೋಡಿ ಸತ್ವಗುಣಾತ್ಮಕನಾದ ಭಗವಂತನ ಪಾದಾರವಿಂದವನ್ನು ಸೇರಿಕೊಳ್ಳುವುದಕ್ಕೆ ಈ ಸಮಯವನ್ನು ಬಿಟ್ಟರೆ ಬೇರೆ ಸಮಯವು ದೊರಕೀತೆ? ಎಂಬ ಅಭಿಪ್ರಾಯದಿಂದ ಆ ಸನ್ಯಾಸಿನಿಯು ಗಂಗೆಯಲ್ಲಿ ಧುಮ್ಮಿಕ್ಕುವುದಕ್ಕೆ ಅಣಿಯಾಗಿ ನಿಂತಿದ್ದಳು. ಸುತ್ತಲೂ ನೋಡುವಳು. ಹಾಗೆ ಹಾ ನಿಟ್ಟುಸಿರು ಬಿಡುವಳು. ಒಂದೊಂದು ಸಲ ಭಗವಂತನೇ! ನನಗೆ ನಿನ್ನಲ್ಲಿ ಸ್ಥಳವನ್ನು ಕೊಡುವೆಯಾ? ಮಹಾತಾಯೇ, ಗಂಗೆ! ನಿನ್ನ ಗರ್ಭದಲ್ಲಿ ಈ ಪಾಪಿನಿಯಾದ ನನಗೆ ಕಿಂಚಿತ್ತಾದರೂ ಸ್ಥಳವನ್ನು ಕೊಡುವೆಯಾ? ಎಂದು ಕೇಳುವಳು. ಈ ಜಲಪ್ರವಾಹವನ್ನೇ ದೃಷ್ಟಿಸಿ ನೋಡುತ್ತಿದ್ದಾಳೆ. ಅಲೆಗಳು ಒಂದರ ಹಿಂದೊಂದು ಗಂಭೀರನಾದದೊಡನೆ ದಡದ ಕಡೆಗೆ ಬರುತ್ತಿದ್ದುವು. ಇದನ್ನು ನೋಡಿ, ತಾಯಿ ಈಗ ನಾನು ಧನ್ಯಳಾದೆ. ನಿನ್ನ ಪ್ರಸನ್ನತೆಯನ್ನು ತೋರ್ಪಡಿಸಿ ಬೇಗನೆ ಬಾ ಎಂದು

ಕೈಗಳಿಂದ ಕರೆಯುತ್ತಿರುವೆ. ಈಶ್ವರಾ! ಈ ಪ್ರಪಂಚದ ಬಾಳು ನನ್ನ ಪಾಲಿಗೆ ತೀರಿತೆ? ತಾಯೆ! ಎಂದು ಗಂಗಾ ಪ್ರವಾಹದಲ್ಲಿ ಬಿದ್ದು ಬಿಟ್ಟಳು. ದುಢುಂ ಎಂದು ಸದ್ದಾಯಿತು. ನೀರು ಮೇರೆದಪ್ಪಿತು.

ಸನ್ಯಾಸಿನಿಯು ಗಂಗೆಯಲ್ಲಿ ಬಿದ್ದ ಸದ್ದು ಸನ್ಯಾಸಿಗೂ ಗೊತ್ತಾಯಿತು. ಸನ್ಯಾಸಿಯು ವಿವೇಕನಾಪರನಾದುದರಿಂದ ಈ ವಿಯೋಗಿನಿಯೇ ಪ್ರವಾಹದಲ್ಲಿ ಬಿದ್ದು ಬಿಟ್ಟಿರಬೇಕೆಂದು ಊಹಿಸಿದನು. ಆಗ ಇವನ ಮನಸ್ಸು ಕರಗಿತು. ಅಕಟಾ! ಅನ್ಯಾಯವಾಗಿ ನಿರಪರಾಧಿನಿಯಾದ ಸ್ತ್ರೀಯು ಪ್ರಾಣಬಿಟ್ಟು ಕೊಳ್ಳುವುದಕ್ಕೆ ನಾನೆ ಕಾರಣನಾದೆನಲ್ಲ! ಎಂದು ಕೂಡಲೆ ಅಲ್ಲಿಂದೆದ್ದು ಸದ್ದು ಕೇಳಿಸಿದ ಸ್ಥಳಕ್ಕೆ ಹೋಗಿ ಗುರುತುಹಿಡಿದು ತಾನೂ ಬಿದ್ದು ಬಿಟ್ಟನು.

* * * * * *

ಸನ್ಯಾಸಿಯು ಕುಳಿತಿದ್ದಾನೆ. ಮೃತಪ್ರಾಯವಾದ ಸನ್ಯಾಸಿನಿಯ ದೇಹವು ಆವನ ತೊಡೆಯ ಮೇಲೆ ಬಿದ್ದಿದೆ. ಅವಳ ಪ್ರಾಣರಕ್ಷಣೆಗೆ ಆಗಬೇಕಾದ ಉಪಚಾರಗಳಾವುವೋ ಅವೆಲ್ಲವನ್ನೂ ಮಾಡುತ್ತಿದಾನೆ. ಕೊಂಚ ಹೊತ್ತಿನ ಮೇಲೆ ಅವಳಿಗೆ ಸ್ವಲ್ಪ ಚೇತನವುಂಟಾಯಿತು. ಕೈ ಕಾಲುಗಳು ಅಲ್ಲಾಡಿದವು. ಮೆಲ್ಲ ಮೆಲ್ಲನೆ ಉಸಿರಾಡ ತೊಡಗಿತು. ವಿಯೋಗಿನಿಯು ಒಂದು ಸಲ ತಲೆಯನ್ನು ಅಲ್ಲಾಡಿಸಿದಳು. ಹಾಗೆಯೇ ಸ್ವಲ್ಪ ಸ್ವಲ್ಪವಾಗಿ ಕಣ್ಣು ರೆಪ್ಪೆಯನ್ನು ತೆರೆಯುತ್ತಾ ಮೇಲೆ

ನೋಡಿದಳು. ತಾನು ತನ್ನ ಸ್ವಾಮಿಯ ತೊಡೆಯ ಮೆಲೆಯೇ ಮಲಗಿರುವುದು ತಿಳಿಯಿತು. ಕಣ್ಣುಗಳಲ್ಲಿ ನೀರು ತುಂಬಿ ಕೊಂಡಿತು. ಮಾತನಾಡುವುದಕ್ಕೆ ತ್ರಾಣವಿಲ್ಲ. ಅವಳ ಭಾವ ವನ್ನು ನೋಡಿ ಸನ್ಯಾಸಿಯು ಬಹು ಸಂಕಟಪಟ್ಟುಕೊಂಡನು. ಕೊಂಚ ಹೊತ್ತು ಯಾರೂ ಮಾತಾಡಲಿಲ್ಲ. ವಿಯೋಗಿನಿಯು ಸ್ವಾಮಿಯ ಮುಖಮಂಡಲವನ್ನೇ ಕುರಿತು ನೋಡುತಿದ್ದಳು. ಆಗ ಸನ್ಯಾಸಿಯು-ವಿಯೋಗಿನಿ! ಆತ್ಮ ಹತ್ಯೆಯು ಮಹಾ ಪಾತಕವೆಂಬುದನ್ನು ತಿಳಿದು ಕೊಳ್ಳದೇ ಹೋದೆಯಲ್ಲಾ! ಏತಕ್ಕೆ ಈ ಪಾಪಕಾರ್ಯದಲ್ಲಿ ಉದ್ಯುಕ್ತಳಾದೆ? ಎಂದನು.

ವಿಯೋಗಿನಿ-(ಕುಗ್ಗಿದ ಸ್ವರದಿಂದ) ನಾಥಾ! ಇದು ಆತ್ಮ ಹತ್ಯೆಯಲ್ಲ. ಇಚ್ಛಾಮರಣ. ಈ ಕಾಶೀಕ್ಷೇತ್ರದಲ್ಲಿ, ಈ ಲೋಕಪಾವನವಾದ ಗಂಗಾಗರ್ಭದಲ್ಲಿ, ಅದೂ ಅಲ್ಲದೆ ಮುಖ್ಯವಾಗಿ, ನನ್ನ ಸ್ವಾಮಿಯ ಚರಣಪ್ರಾಂತದಲ್ಲಿ ಪ್ರಾಣ ಬಿಡುವುದರಿಂದ ಆತ್ಮಹತ್ಯಾ ಪಾತಕವು ಬಂದೀತೇ?

ಸನ್ಯಾಸಿ-(ದೀರ್ಘನಿಶ್ವಾಸದೊಡನೆ) ವಿಯೋಗಿನಿ! ನಿನ ನ್ನು ಬಹು ಕಷ್ಟಪಟ್ಟು ನೀರಿನಿಂದ ಉದ್ಧರಿಸಿದೇನೆ. ಹೇಗಾ ದರೂ ನಿನ್ನ ಪ್ರಾಣವು ಉಳಿದುಕೊಂಡರೆ ನನ್ನ ಶ್ರಮವು ಸಾ ರ್ಥಕವಾಗುವದು.

ಇದನ್ನು ಕೇಳಿ ವಿಯೋಗಿನಿಯು ಸ್ವಲ್ಪ ನಕ್ಕಳು. ಆ ಕಾಶದಲ್ಲಿ ಚಂದ್ರನು ನಗುತ್ತಿದಾನೆ. ಈ ನಗುವು ಆ ನಗು ವಿನಲ್ಲಿ ಸೇರಿಹೋಯಿತು. ಆಗ ವಿಯೋಗಿನಿಯು-ಪ್ರಾಣನಾಥ

ನಿನ್ನ ತೊಡೆಯಮೇಲೆ ತಲೆಯಿಟ್ಟುಕೊಂಡು, ನಿನ್ನ ಮುಖವನ್ನು ನೋಡುತ ನೋಡುತ ಸಾಯುವ ಸಂತೋಷವು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದಿಂದ ನನಗೆ ಲಭಿಸಿದೆ. ಇದನ್ನು ಹಾಳುಮಾಡಿಕೊಳ್ಳಲೇ? ಇದನ್ನು ಬಿಟ್ಟರೆ ಇಂತಹ ಸುಖಮೃತ್ಯುವು ನನಗೆ ದೊರೆತೀತೆ! ನನ್ನ ಕಡೆಗಾಲದಲ್ಲಿ ನಾನು ನಿನ್ನನ್ನು ಬೇಡಿಕೊಳ್ಳುವುದು ಇಷ್ಟೆ. ನನ್ನ ಸರ್ವಾಪರಾಧವನ್ನೂ ಕ್ಷಮಿಸು. ಪರಲೋಕಯಾತ್ರೆಗೆ ಅಪ್ಪಣೆಯನ್ನು ಕೊಡು. ಈ ಜನ್ಮದಲ್ಲೇನೋ ಇಲ್ಲ. ಮುಂದೆಯಾದರೂ ನಿನ್ನ ಸೇವೆಯು ಚಿರಕಾಲ ಲಭಿಸುವಂತೆ ಆಶೀರ್ವದಿಸು. ಎಲ್ಲಕ್ಕಿಂತಲೂ ಮುಖ್ಯವಾಗಿ ಸರ್ವನಾಶಕರವಾದ ಆ ನಾಚಿಕೆಯು ಮತ್ತೆ ನನ್ನನ್ನು ಸೇರದಂತೆ ಅನುಗ್ರಹಮಾಡು; ಎಂದಳು. ಈ ವೇಳೆಗೆ ಮಾತುಗಳು ಸರಿಯಾಗಿ ಹೊರಡಲಾರದೇ ಹೋದವು. ಕಣ್ಣಾಲಿಯು ತಿರುಗುವುದಕ್ಕೆ ಮೊದಲಾಯಿತು. ತನ್ನ ಕೈಗಳನ್ನು ಸ್ವಾಮಿಯ ಚರಣದಲ್ಲಿಡಬೇಕೆಂದು ಕೈನೀಡಿದಳು. ಅದು ಸಾಧ್ಯವಾಗಲಿಲ್ಲ. ಒಂದು ಸಲಗಂಟಲಿನಲ್ಲಿ ಒಂದುಬಗೆಯ ಸ್ವರವು ಹೊರಟಿತು. ಆಗ ಮತ್ತೆ ತೊದಲು ಮಾತಿನಿಂದ-ಅಪ್ಪಣೆಯನ್ನು ಕೊಡು, ನಾನು ಹೋಗಿ----

ಹೀಗೆನ್ನುತ ಎನ್ನುತ ವಿಯೋಗಿನಿಯ ನೇತ್ರಪದ್ಮವು ಚಂಡಾತಪದಿಂದ ಕ್ರಮಕ್ರಮವಾಗಿ ಮುಚ್ಚಿಕೊಳ್ಳುತ ಬಂದಿತು. ದೇಹವು ನಿಷ್ಪಂದವಾಯಿತು. ಆಗ ಸನ್ಯಾಸಿಯು ಕಾಳೀಕಿಶೋರನಾಗಿ ಹೋದನು. ಕಣ್ಣೀರಿನಿಂದ ದೇಹವೆಲ್ಲವೂ

ಹೊಯಿದು ಹೋಯಿತು. ಹುಚ್ಚನಂತೆ ಗಟ್ಟಿಯಾಗಿ ಹೋ ! ಎಂದು ಗೋಳಾಡುತ್ತಾ ಎದ್ದು ಗಟ್ಟಿಯಾಗಿ—ವಿಯೋಗಿನಿ ! ವಿಯೋಗಿನಿ !! ಹಾ ವಿಯೋಗಿನಿ !!! ನೀನು ಹಿಂದಿರುಗಿಬಾ ರೆಯಾ! ಈ ಸನ್ಯಾಸಧರ್ಮಕ್ಕೆ ತಿಲೋದಕ ಕೊಟ್ಟು ಪುನಃ ಗೃಹಸ್ಥಾಶ್ರಮವನ್ನು ಸ್ವೀಕರಿಸುವೆನು-ಎಂದು ಕೂಗಿಕೊಂಡು ಇನ್ನೊಂದು ಸಲ ವಿಯೋಗಿನಿಯ ಶರೀರವನ್ನು ನೋಡಿ, ಅಯ್ಯೋ ! ನನ್ನ ತಲೆಯಮೇಲೆ ನಾನೇ ಕಲ್ಲು ಹಾಕಿ ಕೊಂಡೆನು. ವಿಯೋಗಿನಿ ! ಹೋದೆಯಾ ! ಹೊದೆಯಾ !

ವಿಯೋಗಿನಿಯ ಕಣ್ಣುಗಳು ಮುಚ್ಚಿಯೇ ಹೋದವು.

ಸಂಪೂರ್ಣಂ.

———:o:———